# ಸಿದ್ಧಗಂಗಾ





ಭಾರತದ ಬಾವುಟವು ಹಾರುತಿದೆ ನೋಡು
ಎತ್ತರಕೆ ಬಿತ್ತರಕೆ ಏರುತಿದೆ ನೋಡು ||
ಕೇಸರಿಯು ಸಿರಿಮುಡಿಯು ಮೇಲೆ ಮೆರೆಯುವುದು,
ತ್ಯಾಗವೆಲ್ಲಕು ಮೇಲೆ ಮೇಲೆನ್ನುತಿಹುದು ||
ಹಸುರುಡೆಯು ನಡೆಮುಡಿಯು ಕೆಳಗೆಹಾಸಿಹುದು,
ಸಂಪದವ ಸಾರುತ್ತೆ ತೂಗಿ ತೊನೆಯುವುದು ||
ನೋಡದೋ ನಟ್ಟನಡು ಬಿಳುಪು ಬೆಳಗುವುದು,
ಶಾಂತಿಗದು ಕುರುಹಾಗಿ ತೊಳತೊಳಗುತಿಹುದು ||
ಧವಳಿಮೆಯು ಮಧ್ಯದಲಿ ತಿರುಗುತಿದೆ ಚಕ್ರ,
ಅದು ಅಶೋಕನ ಚಕ್ರ ವರ ಧರ್ಮಚಕ್ರ ||
ತ್ಯಾಗ ಶಾಂತಿ ಸಮೃದ್ಧಿ ತುಂಬಿರುವ ನಾಡು,
ಭಾರತದ ಬಾವುಟಕೆ ವಂದನೆಯ ಮಾಡು ||

"ನಾಣಿ"

ಆಗಸ್ಟ್, 1976

# ಶ್ರೀ ಸಿದ್ಧಗಂಗಾ ಮಠ

## ಇದು ಸಹಸ್ರಾರು ಬಡ ಮಕ್ಕಳ ವಿದ್ಯಾ ಕೇಂದ್ರ

★ ಇಲ್ಲಿ ಕಾಣುತ್ತಿರುವ ಅನ್ನ-ಜ್ಞಾನ ದಾಸೋಹದ ಮಹಾಕಾರ್ಯ ಅಪೂರ್ವವಾದುದು.

★ ಈ ಅಪ್ರತಿಮವಾದ ಮಹತ್ಕಾರ್ಯಕ್ಕೆ ನಾಡಿನ ಲಕ್ಷಗಟ್ಟಲೆ ಅಭಿಮಾನಿಗಳು ಉದಾರವಾಗಿ ನೆರವು ನೀಡುತ್ತಿದ್ದಾರೆ.

★ ಎಲ್ಲರಿಗೂ ಕೃತಜ್ಞತೆಯನ್ನು ಸಮರ್ಪಿಸುತ್ತೇವೆ.
ಇಂತಹ ಪುಣ್ಯಕಾರ್ಯಗಳಿಗೆ ಭಾಗಿಗಳಾಗಲು ಮನವಿ.

ನಿಮ್ಮ ಕೊಡುಗೆಯನ್ನು ಎಂ.ಒ, ಚೆಕ್ ಅಥವಾ ಡ್ರಾಫ್ಟ್ ಮೂಲಕ ಶ್ರೀ ಸನ್ನಿಧಿಗೆ ಕಳುಹಿಸಿ.

ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು
ಶ್ರೀ ಸಿದ್ಧಗಂಗಾ ಮಠ-572131
ತುಮಕೂರು ಜಿಲ್ಲೆ.

ಇತಿ ಭಕ್ತಮಂಡಲಿ.

---

**ಸರ್ವಶ್ರೇಷ್ಠ ಭಾರತೀಯ ಕಾಫಿ ಸುಲಭ ಬೆಲೆಯಲ್ಲಿ**
**ಭಾರತದ ಎಲ್ಲಾ ಕಡೆ ಬಳಕೆದಾರರಿಗೆ ದೊರೆಯಲಿದೆ**

## ಕಾಫಿ ಬೋರ್ಡ್ ಕಾಫಿ ಪುಡಿ

**ರಿಯಾಯಿತಿ ಬೆಲೆ:- ಕಿಲೋಗೆ ರೂ. 11.60**

ಫೆಬ್ರವರಿಯಿಂದ 1976ರ ಸಾಲು ಪೂರ್ತಿ ಕಾಫಿ ಬೋರ್ಡ್ ಬ್ಲೆಂಡ್ ಕಾಫಿ ಪುಡಿ ಬಳಕೆದಾರರ ಹಿತದೃಷ್ಟಿಯಿಂದ (ವಾಸ್ತವವಾಗಿ ಕಿಲೋಗೆ ರೂ. 16.00 ರಂತೆ ತಗಲುತ್ತದೆ) ಕಿಲೋಗೆ ರೂ. 11.60ರಂತೆ ಮಾರಾಟವಾಗಲಿದೆ.

ಕಾಫಿಯನ್ನು ಸೇವಿಸುವ ಭಾರತೀಯ ಸೋದರರಿಗಾಗಿ ಬೇಸಾಯಗಾರರು ಮಾಡಿರುವ ಉದಾರ ರಿಯಾಯಿತಿ ಈ ಸೌಲಭ್ಯವನ್ನು ಸಾಧ್ಯವಾಗಿ ಮಾಡಿರುವುದು.

ದೊರೆಯುವ ಸ್ಥಳ:
ಕಾಫಿ ಬೋರ್ಡ್ ನಡೆಸುವ ಎಲ್ಲ ಇಂಡಿಯಾ ಕಾಫಿ ಡಿಪೋಗಳು ಮತ್ತು ಕಾಫಿ ಹೌಸ್‌ಗಳು.

# ಕಾಫಿ ಬೋರ್ಡ್ ಬೆಂಗಳೂರು

'ಸಿದ್ಧಗಂಗಾ'

ಆಗಸ್ಟ್, ೧೯೭೬

ಸಂಪುಟ-೧೨ ಸಂಚಿಕೆ-೮

ಮುಖ ಪುಟ

ಜಗವೇ ತನ್ನನು ದಿಟ್ಟಿಸುವಂದದೆ
ಮುಗಿಲನು ಮುಟ್ಟದೆ! ಹಾರುತಿದೆ!!

ಪ್ರಕಾಶಕರು
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ
ಹೆಚ್. ಬಿ. ಗಂಗಾಧರಯ್ಯ

ಸಂಪಾದಕರು
ಪಂ|| ಚನ್ನಪ್ಪ ಎರೇಸೀಮೆ
ಕೆ. ಜಿ. ರಂಗಯ್ಯ

ಜಾಹೀರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಹಂಚಿಕೆಯ ವ್ಯವಸ್ಥಾಪಕರು
ಎಸ್. ಗಂಗರುದ್ರಪ್ಪ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ: 10 ರೂ
ಆಜೀವ ಸದಸ್ಯತ್ವ: 101 ರೂ



# ಶ್ರೀವಾಣಿ

ಸ್ವಾತಂತ್ರ್ಯ ಬಂದು ಬಹಳ ವರ್ಷಗಳಾದರೂ ನಾವು ನಿರೀಕ್ಷಿಸಿದ ಗುರಿಯನ್ನು ಮುಟ್ಟಲಾಗಿಲ್ಲ. ಅನೇಕ ವಿಧವಾದ ಕಾರ್ಯ ಸಾಧನೆಯನ್ನು ಮಾಡಿದ್ದೇವೆ. ಮಾಡಬೇಕಾಗಿರುವುದನ್ನು ವಿಮರ್ಶಿಸಿದಾಗ ನಾವು ಗುರಿ ಸಾಧನೆಯ ಮಾರ್ಗದಲ್ಲಿ ಇನ್ನೂ ಬಹಳ ಹಿಂದಿದ್ದೇವೆ. ಜನರ ಬಯಕೆಗಳನ್ನು ಪೂರೈಸುವಲ್ಲಿ ರಾಷ್ಟ್ರ ಪ್ರಗತಿಪರ ಯೋಜನೆಗಳನ್ನು ಹಾಕಿಕೊಂಡು ಆ ದಿಸೆಯಲ್ಲಿ ಮುನ್ನಡೆಯುತ್ತಿರುವುದು ಗಮನಾರ್ಹವಾದುದಾಗಿದೆ. ಜನತೆಯೂ ಸಹ ಹೆಚ್ಚಿನ ಕೆಲಸ ಹಾಗೂ ಹೆಚ್ಚಿನ ಜವಾಬ್ದಾರಿ ಹೊತ್ತು ಹಗಲೂ ಇರುಳೂ ದುಡಿದರೆ ನಮ್ಮ ದೇಶಕ್ಕೆ ಉತ್ತಮ ಭವಿಷ್ಯ ಸಾಧ್ಯ.

ಗಾಂಧೀಜಿಯವರ ಆತ್ಮಶಕ್ತಿ, ತಪಸ್ಸು ಸಂಯಮ ಮತ್ತು ಶ್ರದ್ಧೆ ಇವುಗಳಿಂದ ಸ್ಫೂರ್ತಿಗೊಂಡ ಹಲವಾರು ವ್ಯಕ್ತಿಗಳ ನಿಸ್ವಾರ್ಥ ತ್ಯಾಗಜೀವನದ ಫಲವೇ ಸ್ವಾತಂತ್ರ್ಯ. ಮನುಷ್ಯ ಹೇಡಿಯಾಗಿ ಬಾಳಬಾರದು. ತನ್ನ ಗೌರವ, ತನ್ನ ಜನರ ಹಾಗೂ ದೇಶದ ಗೌರವ ಕಾಪಾಡಲು ಸದಾ ಪ್ರಯತ್ನಿಸಬೇಕು. ಅಂತಹ ಕಾರ್ಯದಲ್ಲಿ ನಿರತನಾಪವನಿಗೆ ಯಾವ ಅಡ್ಡಿ ಆತಂಕಗಳು ಎದುರಾದರೂ ಅವನು ಹೆದರಬೇಕಾಗಿಲ್ಲ.

ಭವ್ಯಭಾರತದ ದಿವ್ಯ ಶಿಲ್ಪಿಗಳಾಗಬೇಕಾದ ವಿದ್ಯಾರ್ಥಿಗಳು ಪೊಳ್ಳು ಮಾತುಗಳನ್ನು ದೂರಮಾಡಿ ಯಥಾವತ್ತಾದ ಮಾತಿಗೆ ಬೆಲೆಕೊಟ್ಟು ಸತ್ಯವಾದ, ಸರಳವಾದ ಹಾಗೂ ನೇರವಾದ ನಡೆನುಡಿಗಳಿಂದ ಅನ್ಯರಿಗೆ ಆದರ್ಶಪ್ರಾಯರಾಗಿ ಜನತೆಯಲ್ಲಿ ಮನೆಮಾಡಿಕೊಂಡಿರುವ ಅಜ್ಞಾನ, ಮೌಢ್ಯ, ಅಲಸಿಕೆಗಳನ್ನು ತೊಡೆದು ಹಾಕುವಲ್ಲಿ ನೆರವಾಗಬೇಕು. ಆಗ ಮಾತ್ರ ಹುಟ್ಟಿದ್ದಕ್ಕೂ ಸಾರ್ಥಕ, ಕಲಿತದ್ದಕ್ಕೂ ಒಂದು ಬೆಲೆ.

ಪ್ರಾಣಕ್ಕೆ ಸಮಾನವಾದುದು ಅಭಿಮಾನ. ಅಭಿಮಾನ ಎಂದರೆ ಅಹಂಕಾರ ಎಂದು ಅರ್ಥವಲ್ಲ. ಅಹಂಕಾರ ಕೆಟ್ಟದ್ದು. ಅದನ್ನು ಪೋಷಿಸಬಾರದು. ಅಭಿಮಾನ ಎಂದರೆ ಆತ್ಮಶ್ರದ್ಧೆ. ಆತ್ಮಗೌರವದಿಂದ ಬಾಳುವುದನ್ನು ಕಲಿಯಬೇಕು. ಆತ್ಮಗೌರವವಿಲ್ಲದೆ ಹರಣವೊರೆವುದಕ್ಕಿಂತ ಮರಣವೇ ಲೇಸು.

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಮಾಸ ಪತ್ರಿಕೆಯು ಲೇಖಕರಿಂದ ವಿಚಾರ ಪ್ರಚೋದಕವಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಧರ್ಮ, ಸಂಸ್ಕೃತಿ, ಸಾಮಾಜಿಕ, ಐತಿಹಾಸಿಕ ಹಾಗೂ ಸ್ಥಳ ಮಹಾತ್ಮೆಗಳಿಗೆ ಸಂಬಂಧಿಸಿದವುಗಳಾದರೆ ಹೆಚ್ಚು ಆದ್ಯತೆ ನೀಡಲಾಗುವುದು. ಪ್ರಚಲಿತ ಸಾಮಾಜಿಕ ಜೀವನದ ಸಮಸ್ಯೆಗಳನ್ನು ಬಿಂಬಿಸುವ ಹಾಗೂ ಅವುಗಳಿಗೆ ಪರಿಹಾರ ಸೂಚಿಸುವ ಸಣ್ಣಕಥೆ, ಕವನ ಮತ್ತು ಪ್ರಬಂಧಗಳಿಗೂ ಸ್ವಾಗತವುಂಟು. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿರಬೇಕು. ಸ್ವೀಕೃತವಾದ ಲೇಖನಗಳಿಗೆ "ಸಿದ್ಧಗಂಗಾ" ಆಗಿಂದಾಗ್ಗೆ ನಿಗದಿ ಮಾಡಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು ಸ್ಫುಟವಾಗಿ ಕಾಗದದ ಒಂದೇ ಮಗ್ಗುಲಲ್ಲಿ ಬರೆದು

"ಸಂಪಾದಕರು"

'ಸಿದ್ಧಗಂಗಾ' [ಕನ್ನಡ ಮಾಸಪತ್ರಿಕೆ]

ಶ್ರೀ ಸಿದ್ಧಗಂಗಾ ಕ್ಷೇತ್ರ -572131

ತುಮಕೂರು ಜಿಲ್ಲೆ

ಇವರಿಗೆ ಕಳುಹಿಸಿ ಕೊಡಬೇಕಾಗಿ ವಿನಂತಿ.

## ಪರಿವಿಡಿ




ಲೋಕಪ್ರಸಿದ್ಧಿಯಾದ ಉತ್ತಮವಾದ



ಬಸವೇಶ್ವರ ಬ್ರಾಂಡ್

ಸೀಗೆಪುಡಿ ಉಪಯೋಗಿಸಿ

ಶ್ರೀ ಚನ್ನಬಸವೇಶ್ವರ ಸೋಪ್‌ನಟ್ ವರ್ಕ್ಸ್

ಶಿವಾಜಿ ನಗರ, ತುಮಕೂರು

# ಭಾರತ ಭಾಗ್ಯವಿಧಾತ

—'ನಾಣಿ'

ಅಂದೆಂದೋ ಆದ ಮಹಾ ಭಾರತ ಯುದ್ಧವು ಹದಿನೆಂಟು ದಿನಗಳ ಕಾಲ ನಡೆಯಿತೆಂದು ಹೇಳಲಾಗಿದೆ. ದುಷ್ಟ ಕೌರವ ಶಕ್ತಿಗಳೊಂದಿಗೆ ಶಿಷ್ಟ ಪಾಂಡವ ಶಕ್ತಿಗಳು ನಡೆಸಿದ ಅಂತಿಮ ಹೋರಾಟ ಹದಿನೆಂಟು ದಿನಗಳ ಪರಿಯಂತ ನಡೆದಿರಬಹುದು, ಧರ್ಮಬಲ, ಬಾಹುಬಲ, ದೈವಬಲ, ತ್ಯಾಗಬಲ ಮತ್ತು ಯೋಗಬಲಗಳೈದರ ಸಮನ್ವಯ ಶಕ್ತಿಯೇ ಪಂಚ ಪಾಂಡವರು. ತಮ್ಮ ನೆಲೆಯನ್ನು ಕಸಿದುಕೊಂಡು ಕಾಡು ಮೇಡುಗಳಲ್ಲಿ ಅಲೆಸಿ ಅಲೆಮಾರಿಗಳನ್ನಾಗಿ ಮಾಡಿದ ಕೌರವರ ಅಧಿಕಾರಶಾಹಿಯ ವಿರುದ್ಧ ಸಿಡಿದೆದ್ದ ವಿದ್ರೋಹ ಜ್ವಾಲೆಯು ರಣಾಗ್ನಿಕುಂಡದಲ್ಲಿ ಪ್ರಜ್ವಲಿಸಿ ಕೌರವರನ್ನು ಸುಟ್ಟುರಿಸಿತು. ಆಧುನಿಕ ಭಾರತವು ಅಂದಿನದಕ್ಕಿಂತ ಕಡಿಮೆಯೇನೂ ಇಲ್ಲ. ಭಾರತೀಯ ಸಾರಸತ್ವವನ್ನು ಹೀರಿ ಹಿಪ್ಪೆ ಮಾಡಿ ಭರತಖಂಡದ ಅಖಂಡ ಐಶ್ವರ್ಯವನ್ನು ಸೂರೆಗೊಂಡು; ಸೂರೆಗೊಂಡ ನಾಡಿನಲ್ಲಿ ಬಡತನ ತಾಂಡವಾಡುವಂತೆ ಮಾಡಿ, ದಾರಿದ್ರ್ಯದ ನಗ್ನ ದೇಹಗಳ ಮೇಲೆ ತಮ್ಮ ಭೋಗ ನೃತ್ಯವನ್ನು ನಡೆಸಿದ ಆಂಗ್ಲ ಕೌರವ ಶಕ್ತಿಯ ದರ್ಪ ದಬ್ಬಾಳಿಕೆಗಳು ಕ್ರೂರತೆಯಲ್ಲಿ ಮೀರಿನಿಂತು, ಧರ್ಮವೇ ಶರಣೆಂದು ಬಾಳಿ ಬದುಕುತ್ತಿದ್ದ ಭಾರತೀಯರನ್ನು ನಿಸ್ತೇಜಗೊಳಿಸಿದ್ದ ದುರವಸ್ಥೆಯನ್ನು ದೂರ ಮಾಡುವ ಸಲುವಾಗಿ ಭಾರತದ ಭಾಗ್ಯವಿಧಾತನು ಅವತರಿಸಬೇಕಾಯಿತು. ಧರ್ಮ ಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಆರ್ಯ ಸಂಸ್ಕೃತಿಯ ದಾಸ್ಯವಿಮೋಚನಾರ್ಥವಾಗಿ, ಮಹಾನ್ ವಿಭೂತಿ ಪುರುಷನ ಅವತಾರವಾಯಿತು.

ಭಾರತದ ಧರ್ಮ ಸಿಂಹಾಸನದಲ್ಲಿ ವಿಧರ್ಮೀಯರು ಹಿಂದೆ ಎಷ್ಟೋ ಮಂದಿ ಆಳಿದರು. ಹೂಣರು, ಯವನರು, ಮೊಗಲರೇ ಮುಂತಾದ ಪರಧರ್ಮೀಯರು ಭಾರತದ ಸಾಮ್ರಾಜ್ಯ ಸೂತ್ರವನ್ನು ವಹಿಸಿ ಹಿಂದೂ ಪದ ಪಾದಶಾಹಿಯನ್ನು ದಮನಗೊಳಿಸಿದರಾದರೂ ಅವರಾರೂ ಭಾರತೀಯರ ಆತ್ಮಶಕ್ತಿಯ ತೇಜಸ್ಸನ್ನು ಕುಂಠಿತಗೊಳಿಸಲಾಗಲಿಲ್ಲ. ಧರ್ಮ, ಸಾಹಿತ್ಯ, ಕಲೆ, ಸಂಸ್ಕೃತಿಗಳನ್ನು ಅಧಃಪತನಗೊಳಿಸುವ ದುಃಸಾಹಸಕ್ಕೆ ಅವರು ಯಾರೂ ಹೋಗಲಿಲ್ಲ. ಮೇಲಾಗಿ ಶಿಲ್ಪ, ಕಲೆ, ಸಂಗೀತ, ಸಾಹಿತ್ಯಗಳಿಗೆ—ವಿವಿಧ ಸಂಪದಭಿವೃದ್ಧಿ ಕಾರ್ಯಗಳಿಗೆ ಪ್ರೋತ್ಸಾಹವೇ ದೊರೆಯಿತು. ಪರಕೀಯರಾದರೂ ವಿಧರ್ಮೀಯರು ಭಾರತದವರೇ ಆಗಿ ಆಳಿದರು ಬಾಳಿದರು. ಮೊಗಲರ ಕಾಲದಲ್ಲಿಯಾದರೂ ಹಿಂದುತ್ವದ ವಿಡಂಬನೆಯಾಗಲಿಲ್ಲ.

ಆದರೆ ವಿಧಿಯು ಭಾರತದ ವೈಭವವನ್ನು ಸಹಿಸಲಿಲ್ಲ. ಮತ್ತೆ ದಾಸ್ಯದ ಸಂಕೋಲೆಯ ವೈಪರೀತ್ಯವೊದಗಿತು. ತಕ್ಕಡಿ ಹಿಡಿದು ಬಂದ ಆಂಗ್ಲರು ಭಾರತದ ಸಾರಸರ್ವಸ್ವವನ್ನು ಹೀರಿ ತಾವು ಬದುಕಿದರು. ಭಾರತದ ಐಶ್ವರ್ಯ ಲಕ್ಷ್ಮಿಯು ಆಂಗ್ಲರ ಉಪಭೋಗ್ಯ ವಸ್ತುವಾದಳು. ದಾಸತ್ವ ದನಿಗಳ ಬಂಧನದಿಂದ ರಾಷ್ಟ್ರವು ನಿಸ್ತೇಜವಾಯಿತು, ವೇದಭೂಮಿಯ ಅಮೃತ ವಿದ್ಯೆಯು ನೈವೇದ್ಯದ ವಿದ್ಯೆಯಾಯಿತು. ನಮ್ಮ ಆರ್ಷ ಜ್ಞಾನ, ವಿಜ್ಞಾನ, ಕಲೆ, ಗೃಹೋದ್ಯಮಗಳೆಲ್ಲ ಯಂತ್ರಯುಗದ ಕ್ರೂರ ದಾಡೆಗಳಿಗೆ ಸಿಕ್ಕಿ ತತ್ತರಿಸಿ ಕತ್ತರಿಸಿ ಚೂರಾದುವು. ರಾಜನೀತಿಯಂತೂ ಒಡೆದು ಆಳುವ, ವಿದ್ರೋಹಕಾರಕ ಕುಟಿಲ ನೀತಿಯಾಯಿತು. ಭಾರತದ ಧೈರ್ಯ

ಸ್ಥೈರ್ಯಗಳನ್ನೇ ಆಂಗ್ಲರ ದಬ್ಬಾಳಿಕೆಯ ಗುಂಡಿನ ಕೋವಿಗಳು ಅಡಗಿಸಿದವು. ಅಖಂಡ ಇನ್ನೂರು ವರ್ಷಗಳಗೂ ಮಿಕ್ಕು ಆಳಿದ ಆಂಗ್ಲರ ದುರಾಡಳಿತದ ತೊತ್ತಳ ತುಳಿತಕ್ಕೆ ಭಾರತೀಯರು ಜರ್ಜರಿಸಿದರು. ಗುಲಾಮಗಿರಿಯ ಅವಮಾನ ಅಸಹನೀಯವಾಯಿತು. ಆಂಗ್ಲರ ವಿರುದ್ಧ ವಿದ್ರೋಹಾಗ್ನಿ ಉರಿದೆದ್ದಿತು. ಸುಪ್ತ ಆತ್ಮಾಭಿಮಾನ ಕೆರಳಿತು. ಗುಪ್ತ ಸಮರಕ್ಕೂ ಭಾರತವು ಸಿದ್ಧವಾಯಿತು. ಎಚ್ಚೆತ್ತ ಭಾರತದ ಸ್ವಾತಂತ್ರ್ಯದ ಉತ್ಕಟೇಚ್ಛೆಯನ್ನು ದಮನಗೊಳಿಸಲ ಆಂಗ್ಲರು ಗುಂಡಿನ ಮಳೆಗರೆದರು.

ಇಂತಹ ವಿಷಮ ಪರಿಸ್ಥಿತಿಯನ್ನು ದೇಶ ಎದುರಿಸಿತು ಬೇಸತ್ತ ಜನತೆ ರೊಚ್ಚಿಗೆದ್ದು ಆಂಗ್ಲರ ಆಡಳಿತದ ಬೇರನ್ನು ಕಿತ್ತೊಗೆಯಲು ಅನುವಾಯಿತು. ಆಂಗ್ಲರ ಎದೆ ಬಡಿತ ಆರಂಭವಾಗಿ ಅವರೂ ಒಂದು ಯುಕ್ತಿ ಹೂಡಿದರು. ಸ್ವಸುರಕ್ಷಿತತೆಯ ಸಲುವಾಗಿ ಬ್ರಿಟೀಷ್ ಮುತ್ಸದ್ದಿಗಳು ಕಾಂಗ್ರೆಸ್ಸಿನ ದಾರಿ ತೋರಿದರು. ಆದರೂ ಅದು ಭಾರತೀಯರಿಗೆ ಮೊದ ಮೊದಲು ಹೇಡಿಯ ಕೈಗೆ ಬಂದ ಚಂದ್ರಾಯುಧದಂತೆ ಪರಿಣಮಿಸಿತು. 1885ರಿಂದ 1905ರ ವರೆಗೂ ಕಾಂಗ್ರೆಸ್ ಕೂಸು, ಇಪ್ಪತ್ತು ವರುಷ ಕಳೆದರೂ ಅದು ನಡೆದಾಡಲು ಸಮರ್ಥವಾಗಲಿಲ್ಲ, ಬಾಯಿ ಬಿಚ್ಚಿ ಮಾತಾಡಲು ಮುಂದಾಗಲಿಲ್ಲ. ಕಾಂಗ್ರೆಸ್ಸಿನ ಬಾಲಾರಿಷ್ಟವನ್ನು ಅರವಿಂದರು ತಮ್ಮ ಯೋಗಬಲದಿಂದ ತೊಡೆದರು. ಲಾಲಾ ಲಜಪತರಾಯ್, ಬಿಪಿನಚಂದ್ರಪಾಲ್ ಬಾಲಗಂಗಾಧರ ತಿಲಕರಂತಹ ಮುತ್ಸದ್ದಿಗಳು ಕಾಂಗ್ರೆಸ್ಸಿನ ಹೊಲವನ್ನು ಹದಗೊಳಿಸಿದರು. ಭಾರತದ ಹೊಲದಲ್ಲಿ ರಾಷ್ಟ್ರೀಯತೆಯ ಬಿತ್ತನೆ ಆಯಿತು. ಕಳೆ ಕೀಳುವ ಹಾಗೂ ಎಡೆಹೊಡೆಯುವ ಕೆಲಸವನ್ನು ಲೋ|| ಮಾ|| ತಿಲಕರು ಮುಂದಾಳಾಗಿ ವಿಸ್ತರಿಸಿದರು. ಇದೇ ವೇಳೆಗೆ ಗಾಂಧೀಜಿ ಸಮರಾಂಗಣಕ್ಕಿಳಿದರು.

ದಕ್ಷಿಣ ಆಫ್ರಿಕಾದಲ್ಲಿ ಸತ್ಯಾಗ್ರಹದ ಆಂದೋಲನದ ತಜ್ಞತೆಯನ್ನು ದೊರಕಿಸಿಕೊಂಡು ಗಾಂಧೀಜಿ

ಭಾರತಕ್ಕೆ ಬಂದ ಮೇಲೆ, ತಾನೇ ಬೇಲಿ ಹಾ
ಹಕ್ಕಿ ಕಾಯ್ದು, ಕಾಳಿನ ರಾಶಿ ಮಾಡಬೇಕಾದ ವಿಸ
ರ ಭೂಮಿಯನ್ನೆಲ್ಲಾ ತಿರುಗಾಡಿ ನೋಡಿಕೊಂಡರು
ಇನ್ನೇನು ಭಾರತವು ಎಚ್ಚೆತ್ತಿತು ಅನ್ನುವ ಸ್ಥಿ
ಕಾಲಿಟ್ಟ ತರುಣದಲ್ಲೇ ತಿಲಕರು ದೇಹವಿಟ್ಟರು.. ಅ
ನೊಗವು ಗಾಂಧೀಜಿಯ ಹೆಗಲೇರಿತು. ಅದು 1920ನೆ
ಇಸವಿ. ಬಡ ಭಾರತಕ್ಕೆ ತಕ್ಕ ಪ್ರತಿನಿಧಿಯಾದರು
ಬ್ರಿಟಿಷ್ ಸರಕಾರದಿಂದ ಹಕ್ಕುಗಳನ್ನು ಪಡೆದುಕೆ
ಳ್ಳುವ ಸಲುವಾಗಿ ಗಾಂಧೀಜಿ ಹಲವು ವಿಧದ
ಸೌಮ್ಯವಾದ ಉಪಾಯಗಳನ್ನು ಯೋಚಿಸಿದರು
ಅಸಹಕಾರ, ಕಾಯಿದೆಭಂಗ, ಸತ್ಯಾಗ್ರಹ, ಪಿ
ಟಿಂಗ್, ಚಲೇಜಾವ್ ಮುಂತಾದ ಕಾರ್ಯಕ್ರಮ
ಳನ್ನು ಇಪ್ಪತ್ತೇಳು ವರುಷ ಸಾಧಿಸಿದ ಪರಿಣಾಮ
ವಾಗಿ ಸ್ವಾತಂತ್ರ್ಯ ಫಲವು ತಾನಾಗಿ ಪಕ್ವವಾ
ಉಡಿಯಲ್ಲಿ ಬೀಳುವಂತಾಯಿತು. ಅದಕ್ಕಾಗಿ ಜ
ಜಾಗೃತಿಯ ಎತ್ತು ಗಡೆಯನ್ನೂ ಗಾಂಧೀಜಿ ಕ
ಗೊಂಡರು ಖಾದಿಗ್ರಾಮೋದ್ಯೋಗ, ಅಸ್ಪೃಶ್ಯತಾ ನಿ
ರಣೆ, ಹಿಂದೂ ಮುಸ್ಲಿಂ ಏಕತೆ ಮೊದಲಾದ ದಾ
ಗಳನ್ನು ಸುಗಮಗೊಳಿಸಿದರು. ಸೆರೆಮನೆವಾಸ, ಲ
ಗೆಯ ಏಟು, ಆಸ್ತಿ ಪಾಸ್ತಿಗಳ ಮುಟ್ಟುಗೋಲ
ಇಂತಹ ಅಸಹ್ಯ ತೊಂದರೆಗಳನ್ನೆಲ್ಲಾ ಸಹಿಸಿ ಎದ
ರಾಳಿಗಳನ್ನು ದ್ವೇಷಿಸದೇ, ಸತ್ಯಕ್ಕಾಗಿ ಆಗ್ರಹ ತ
ಯುವುದಕ್ಕೆ ಭದ್ರ ಬುನಾದಿ ಹಾಕಿದರು. ಅವಿಶ್ರಾಂತವ
ಇಷ್ಟೆಲ್ಲ ಶ್ರಮಿಸಿದ್ದರ ಫಲವಾಗಿ 1947ನೇ ಆಗಸ್
15ಕ್ಕೆ ಭಾರತವು ಸ್ವಾಧೀನತೆ ಪಡೆಯಿತು. ಆದ
ಅದೆಷ್ಟು ಜಾಗೃತೆ ವಹಿಸಿದರೂ ಭಾರತವು ಅಖಂ
ವಾಗಿ ಉಳಿಯಲಿಲ್ಲ. ತುಂಡಾಯಿತು. ಅಂತೂ ಬಯ
ಸಿದ್ದು ದೊರೆಯಿತು. ಅತುಳ ಸೈನ್ಯ, ಅಪಾರ ಮದ್ದು
ಗುಂಡುಗಳ ಬಲವುಳ್ಳ ಬ್ರಿಟಿಷ್ ಸರಕಾರದೊಡ
ಮದ್ದು ಗುಂಡುಗಳ ಯುದ್ಧ ಮಾಡದೆ ಸ್ವಾತಂತ
ವನ್ನು ಗಳಿಸುವುದಾಗಲಿ ಎದುರಾಳಿಗಳ ಸ್ನೇಹವನ್ನು
ಕಳೆದುಕೊಳ್ಳದೆ, ಅವರ ಕಪಿಮುಷ್ಠಿಯಿಂದ ಸ್ವರಾಜ
ವನ್ನು ಬಿಡಿಸುವುದಾಗಲಿ ಸಣ್ಣ ಮಾತಲ್ಲ, ಸಾಮಾನ
ಸಂಗತಿಯೂ ಅಲ್ಲ. ಆದರೆ ಭಾರತವು ತುಂಡುಗೊಳ್ಳ
ಬಾರದಾಗಿತ್ತು. ಅನಿವಾರ್ಯವಾಗಿ ಆಯಿತು, ಆಳರು

ಆಂಗ್ಲರ ಒಡೆದು ಆಳುವ ನೀತಿ ಫಲಿಸಿತು; ಒಡಕಿನ ವಿಷಬೀಜ ಬಿತ್ತಿಯೇ ಆಂಗ್ಲರು ಕಾಲ್ದೆಗೆದರು. ಈ ವಿಷವು ಫಲಕ್ಕಾಗಿ ಬಾಪೂ ನೊಂದರು. ಖಂಡತುಂಡಾದ ಭಾರತ ಕೈಗೆ ಸಿಕ್ಕಿತಾದರೂ ಅದು ಸ್ವರಾಜ್ಯವೇ ಅಲ್ಲವೆಂದರು. ಸ್ವಾತಂತ್ರ್ಯೋತ್ಸವದಲ್ಲಿ ಭಾಗವಹಿಸದೇ ಹಿಂದೂ ಮುಸ್ಲಿಂ ಏಕತೆಯ ಸಲುವಾಗಿ ನೌಖಾಲಿ ಹಾಗೂ ತಿಪ್ಪೆರಾಗಳ ಅಗ್ನಿಕುಂಡದತ್ತ ಧಾವಿಸಿದರು. ಐಕ್ಯತಾ ಸಾಧನೆಗಾಗಿ ಪಾದಯಾತ್ರೆ, ನಾಯಕರ ಮನವೊಲಿಸುವ ಸಲುವಾಗಿ ಉಪವಾಸವ್ರತ ಎಲ್ಲವನ್ನೂ ಕೈಗೊಂಡರು ಭಾರತ ಅವರ ಮಂತ್ರಕ್ಕೆ ಮಣಿಯಿತು.

ಸ್ವತಂತ್ರತಾ ಆಂದೋಳನಕ್ಕೆ ಸಫಲತೆಯನ್ನು ತಂದುಕೊಟ್ಟ ಭಾರತ ಭಾಗ್ಯವಿಧಾತನನ್ನು ನಾಡು ಮಾತ್ರವಲ್ಲದೆ ಇಡೀ ವಿಶ್ವವೇ ಸ್ಮರಿಸಿತು. ಬಾಪೂಜಿ ತನ್ನನೇ ಬಲಿದಾನವಾಗಿ ಅರ್ಪಿಸಿ ಹುತಾತ್ಮರಾದರು. 'ಹೇರಾಮ್' ಎಂಬ ಉದ್ಘೋಷದೊಂದಿಗೆ ಸ್ವಾತಂತ್ರ್ಯ ಭಾರತಿಗೆ ಆರತಿಯಾಯಿತು.

ವಿಶ್ವದ ಇತಿಹಾಸದ ಪುಟಗಳನ್ನು ಮಗುಚಿ ನೋಡಿದಾಗ ಅಲ್ಲಿ ಸ್ವಾತಂತ್ರ್ಯ ಸಾಧನೆಗಾಗಿ ಕಂಡು ಬರುವ ಹೋರಾಟಗಳೆಲ್ಲಾ ರಕ್ತರಂಜಿತವಾದವು. ಹಿಂಸಾತ್ಮಕವಾಗಿ ಶಕ್ತಿಯ ಅಲಗಿನಮೇಲೆ ನಡೆದ ಘಟನೆಗಳೇ ಪುಟದ ತುಂಬ ಕಾಣುತ್ತದೆ. ಆದರೆ ಸತ್ಯಾಗ್ರಹದಿಂದ ಪ್ರೇರಿತವಾಗಿ, ಅಹಿಂಸೆಯಿಂದ ಪುಷ್ಟಿಗೊಂಡು, ಎದುರಾಳಿಗಳ ವಿರುದ್ಧ ನಡೆಸಿದ ಈ ಬಗೆಯ ಶಾಂತಿಯುತ ಹೋರಾಟ ಸಫಲಗೊಂಡುದು ವಿಶ್ವದ ಇತಿಹಾಸದಲ್ಲೇ ಅಪೂರ್ವ. ನ ಭೂತೋ ನ ಭವಿಷ್ಯತಿ ಎಂಬಂತೆ ಭಾರತವು ತನ್ನದೇ ಆದ ಸತ್ಯಮೇವ ಜಯತೇ ಎಂಬ ಸುವರ್ಣ ಪುಟವನ್ನು ಇತಿಹಾಸದ ಹೊತ್ತಗೆಯಲ್ಲಿ ಜೋಡಿಸಿರುವುದರಿಂದಲೇ ಇಂದು ವಿಶ್ವದ ಮಹಾನ್ ರಾಷ್ಟ್ರಗಳೆಲ್ಲಾ ಭಾರತದ ಮಹತಿಗೆ ಮಣಿದಿವೆ. —

## 'ಕರ್ತವ್ಯ' — ವಿಚಾರಪರರ ದೃಷ್ಟಿಯಲ್ಲಿ

★ ಕರ್ತವ್ಯವೆಂದಿಗೂ ಸುಗಮವಾಗುವುದಿಲ್ಲ. ಪ್ರೀತಿಯ ಕೀಲೆಣ್ಣೆಯು ಬಿದ್ದಾಗಲೇ ಅದು ಸರಾಗವಾಗಿ ಸಾಗುತ್ತದೆ. ಇಲ್ಲದಿದ್ದರೆ ಘರ್ಷಣೆ ತಪ್ಪಿದ್ದಲ್ಲ.

★ ಲೋಕದ ನಿಂದಾಪಮಾನಗಳನ್ನು ಲೆಕ್ಕಿಸದೇ ಮನುಷ್ಯನು ತನ್ನ ಕರ್ತವ್ಯಗಳನ್ನು ಪರಿಪಾಲಿಸಬೇಕು.

—ವಿವೇಕಾನಂದ.

# ವಿಶ್ವವಂದ್ಯ ರವೀಂದ್ರರು

—ದಯಾನಂದ ತೊರ್ಕೆ

**ಜಗತ್ತಿನಲ್ಲಿ** ಗಾಂಧಿಜೀಯಷ್ಟೇ ಗೌರವ ಪಡೆದ ಇನ್ನೊಬ್ಬ ಭಾರತೀಯನೆಂದರೆ ರವೀಂದ್ರನಾಥ ಟಾಗೂರರು ಒಬ್ಬ ಕವಿ ಜಗದ್ವಂದ್ಯನಾಗುವದೇನು ಸಾಮಾನ್ಯ ಮಾತಲ್ಲ.

ಟಾಗೂರರು ಬಂಗಾಳಿಗಳಾದರೂ ಇಡಿಯ ಭಾರತದಆಸ್ತಿ. ಇವರ ಸಾಹಿತ್ಯ ಇಂದು ದೇಶವ್ಯಾಪಿ ಲೋಕವ್ಯಾಪಿ. ೧೯೧೧ ರಲ್ಲಿ ಇವರು ಬರೆದ 'ಜನಗಣಮನ ರಾಷ್ಟ್ರಗೀತೆಯಾಗಿದೆ. ಈ ಹಾಡಿನಲ್ಲಿ ರವೀಂದ್ರರಲ್ಲಿದ್ದ ದೇಶಭಕ್ತಿಸ್ಫುಟವಾಗಿ ಪಡಿಮೂಡಿದೆ. ಇವರು ಕಟ್ಟಾ ರಾಷ್ಟ್ರೀಯವಾದಿ ಗಳಾಗಿದ್ದರು.' ತಮ್ಮ ಲೇಖನಿಯಿಂದ ಅನೇಕ ರಾಜಕೀಯ ಸಮಸ್ಯೆಗಳನ್ನು ವಿಮರ್ಶಿಸಿ ಜನತೆಯಲ್ಲಿ ಜಾಗೃತಿ ಮೂಡಿಸಿದ್ದರು. ಆದರವರು ಪ್ರತ್ಯಕ್ಷವಾಗಿ ರಾಜಕೀಯದಲ್ಲಿ ಭಾಗವಹಿಸಿದ್ದು 1905 ರಿಂದ 1908ರವರೆಗೆ ಮಾತ್ರ. ಈ ಅವಧಿಯೇ ಅವರ ರಾಜಕೀಯ ಜೀವನದ ಆದಿ – ಅಂತ್ಯ.

ಸಾಮಾಜಿಕ ಜೀವನವನ್ನು ಅಷ್ಟಾಗಿ ಅನುಭವಿಸದಿದ್ದರೂ ರವೀಂದ್ರರ ಕಾವ್ಯದಲ್ಲಿ ಮಾನವ ಸಹಜ ದಯೆ, ಪ್ರೀತಿಯ ಚಿತ್ರಣ ಎದ್ದು ಕಾಣುವ ವಿಷಯಗಳಾಗಿವೆ.

ರವೀಂದ್ರರ ಪ್ರತಿಭೆ ಕಾವ್ಯಕ್ಕಷ್ಟೇ ಸೀಮಿತವಾದುದಲ್ಲ. ಕಾದಂಬರಿ, ನಾಟಕ, ತತ್ವಜ್ಞಾನ, ವಿಮರ್ಶೆ, ಕಲೆ, ಸಂಗೀತ, ಅಭಿನಯ, ಇವುಗಳೆಲ್ಲೆಲ್ಲ ಇವರ ಪ್ರತಿಭೆಯನ್ನು ಲೋಕ ಕಂಡಿದೆ. ದಿ। ಎಡ್ವರ್ಡ್ ಥಾಮಸ್ ಎಂಬ ಆಂಗ್ಲ ಲೇಖಕ ತನ್ನ 'Rabhindra-nath Tagore-Poet and dramatist' ಎಂಬ ಪುಸ್ತಕದಲ್ಲಿ ಇವರ ಬಗ್ಗೆ ಬರೆಯುತ್ತ ಅವರ ನಾಟಕ, ಶ್ಲೋಕ, ವಿವಿಧ ಲೇಖನಗಳ 60 ಪುಸ್ತಕಗಳನ್ನು 44 ಪೇಂಟಿಂಗ್ ಸಂಗೀತ ಕುರಿತಾದ ಪುಸ್ತಕಗಳನ್ನು ಹೆಸರಿಸಿದ್ದಾನೆ. ಟಾಗೂರರು ಸುಮಾರು 50 ನಾಟಕಗಳನ್ನು 3000 ಗೀತೆಗಳನ್ನೂ 100ಶ್ಲೋಕಗಳನ್ನು 40 ಕಾದಂಬರಿಗಳನ್ನು-ಕಥೆಗಳನ್ನೂ, ಹತ್ತಾರು ಇನ್ನಿತರೆ ಲೇಖನಗಳನ್ನೂ ಬರೆದಿದ್ದಾರೆ. ಈ ಸಂಖ್ಯೆ ನಿಜವಾಗಿ ಒಬ್ಬ ಸಾಹಿತಿಯ ಅಮೋಘ ಕಾರ್ಯವೆಂದೇ ಹೇಳಬೇಕು.

ರವೀಂದ್ರನಾಥ ಟಾಗೂರರ ಸಾಹಿತ್ಯ ಸಂಖ್ಯೆಯಿಂದ ಮಾತ್ರ ದೊಡ್ಡದಲ್ಲ. ಇವರ ಪ್ರತಿಕೃತಿಯಲ್ಲೂ ಸತ್ವವಿದೆ, ಕಲೆಯಲ್ಲಿ ಜೀವವಿದೆ. ಅದಕ್ಕೆಂದೇ ಜಗತ್ತಿನ ಅನೇಕ ವಿದ್ಯಾಸಂಸ್ಥೆಗಳು, ಸರ್ಕಾರಗಳು. ರಾಜರುಗಳು ಪ್ರಮುಖರು ಇವರನ್ನು ಗೌರವಿಸಿರುವುದು. ಗಾಂಧಿಜೀಯವರು ಇವರನ್ನು ಗುರುದೇವ ಎಂದು ಕರೆದರು. 'ಭಾರತದ ಕವಿರಾಜ' (India's Poet Leaureate), 'ಭಾರತೀಯರ ಬೆಳಕು' (The Sun of India), 'ಪೂರ್ವ ದಿಕ್ಕಿನ ಪಹರೆಯವ' (The Sentinel of the East) ಇವು ಟಾಗೂರರಿಗೆ ದೊರೆತ ಕೆಲವು ವಿಶಿಷ್ಟ ಬಿರುದುಗಳು

ಟಾಗೂರರ ಕವನಗಳು ಮೊದಲು ಅಮೇರಿಕೆಯಲ್ಲಿ ಪ್ರಕಟಗೊಂಡು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಕ್ರಮೇಣ ವ್ಯಾಪಿಸಿದವು. ಷಿಕ್ಯಾಗೋವಿನಿಂದ ಹೊರಡುತ್ತಿದ್ದ Poetry ಎಂಬ ಪತ್ರಿಕೆಯು ಗೀತಾಂಜಲಿಯಿಂದ ಆರು ಕವನಗಳನ್ನು ಆಯ್ದು ಅವುಗಳನ್ನು ಇಂಗ್ಲೀಷಿಗೆ ಅನುವಾದಿಸಿ ಪ್ರಕಟಿಸಿತು. ಒಂದೇ ವರ್ಷದಲ್ಲಿ 'ಗೀತಾಂಜಲಿ'ಗೆ ನೋಬೆಲ್ ಬಹುಮಾನ ಬಹುಮಾನ ಬಂದಿತು.

1912 ರವರೆಗೂ ಸ್ವದೇಶ ಬಿಟ್ಟು ಎಲ್ಲೂ

ಹೋಗದಿದ್ದ ಟಾಗೂರರು ಮೊದಲು ಆ ವರ್ಷ ಇಂಗ್ಲೆಂಡಿನ ಭೂಮಿಯ ಮೇಲೆ ಕಾಲಿಟ್ಟು ಪಾಶ್ಚಾತ್ಯ ಗಾಳಿ ಸೇವಿಸಿದರು. ಇಲ್ಲಿಂದ ಮುಂದೆ ಅನೇಕ ರಾಷ್ಟ್ರಗಳಲ್ಲಿ ಸಂಚರಿಸಿ ಜಗತ್ತಿನಾದ್ಯಂತ ಭಾರತೀಯ ಸಂಸ್ಕೃತಿಯನ್ನು ಬಿತ್ತರಿಸಿದರು. ಚಿಕಾಗೋ ವಿಶ್ವ ವಿದ್ಯಾನಿಲಯದಲ್ಲಿ ಹಾರ್ವರ್ಡ್ ನ್ಯೂಯಾರ್ಕುಗಳಲ್ಲಿ ಉಪನ್ಯಾಸವಿತ್ತು ಜನತೆಯಲ್ಲಿ ಜಾಗೃತಿಯನ್ನು ಮೂಡಿಸಿದರು.

1916 – 17 ರ ಶರತ್ಕಾಲದಲ್ಲಿ ಟಾಗೂರರು ಎರಡನೇ ಬಾರಿ ಅಮೇರಿಕ ಸಂದರ್ಶಿಸಿದಾಗಿನ ಪರಿಸ್ಥಿತಿ ಸ್ವಲ್ಪ ಭಿನ್ನವಾದುದು. ಅಷ್ಟೊತ್ತಿಗಾಗಲೇ ಅವರ ಅನೇಕ ಕವನಗಳು ಇಂಗ್ಲೀಷಿಗೆ ಭಾಷಾಂತರಗೊಂಡು, ಪ್ರಕಟವಾಗಿ ಹೆಸರು ಜಗತ್ಪ್ರಸಿದ್ಧಿಗೊಂಡಿತ್ತು. ಸಿಂಕ್ಲಿಯರ್ ಎಂಬ ಲೇಖಕ 'The North American Review' ದಲ್ಲಿ ಟಾಗೋರರ ಕಾವ್ಯಗಳನ್ನು ವಿಮರ್ಶಿಸಿದ್ದನು. ಭಾರತೀಯರಾದ ಬಸಂತ ಕುಮಾರರಾಯ್ ಅನ್ನುವವರು 'The Open Court' ನಲ್ಲಿ ಭಾರತದ ಇಂದಿನ ಬಹು ದೊಡ್ಡ ಕವಿ ಎಂಬ ಲೇಖನ ಪ್ರಕಟಿಸಿದ್ದರು. 'The American Review of Reviews' ಎಂಬ ಮಾಸಿಕ ಅವರ ಜೀವನ ಪರಿಚಯ ಪ್ರಕಟಿಸಿ ಪ್ರಚುರ ಪಡಿಸಿತ್ತು. ಈ ಪತ್ರಿಕೆ ಟಾಗೋರರ ಬಗ್ಗೆ ಬರೆಯುತ್ತ "It is said that Poets are generally handsome. Rabinranath was no exception to the general rule. He has long been famous in India both for his poetry and beauty" ಎಂದಿದೆ. ನೋಬೆಲ್ ಬಹುಮಾನ ಸಿಕ್ಕಾಗ ನ್ಯೂಯಾರ್ಕ್‌ಟೈಮ್ಸ್ ಒಂದು ಪುಟದ ತುಂಬ ರವೀಂದ್ರರರ ಕುರಿತು (ಫೋಟೋ ಸಹಿತ) ಬರೆಯಿತು. ಹೀಗೆ ಅಮೇರಿಕೆಯ ಎರಡನೇ ಬಾರಿಯ ಸಂದರ್ಶನದ ಹೊತ್ತಿಗೆ ರವೀಂದ್ರನಾಥರ ಹೆಸರು ಅಲ್ಲಿ ಪ್ರಸಿದ್ಧಿಗೊಂಡಿತ್ತು. ಈ ಪ್ರವಾಸದ ಅವಧಿಯಲ್ಲಿ ಅವರು ಪೋರ್ಟ್‌ಲ್ಯಾಂಡ್, ಸ್ಯಾನ್ ಫ್ರಾನ್ಸಿಸ್ಕೋ, ಸಾಂತಾ ಬಾರ್ಬರಾ, ಚಿಕಾಗೊ, ಕ್ಲೀವ್‌ಲ್ಯಾಂಡ್, ಫಿಲಾಡೆಲ್ಫಿಯಾ, ಬೋಸ್ಟನ್, ನ್ಯೂಯಾರ್ಕ್‌ಗಳಲ್ಲಿಯ ವಿದ್ಯಾಸಂಸ್ಥೆಗಳಲ್ಲಿ ತಮ್ಮ ಕಥೆ, ನಾಟಕಗಳನ್ನು ಓದಿ ತೋರಿಸಿದರು. ಒಂದು ಪತ್ರಿಕೆ ರವೀಂದ್ರರ ಆಗಮನದ ಸಂತಸವನ್ನು ಹೀಗೆ ಬರೆದು ಪ್ರಕಟಿಸಿದೆ-"The coming of Sri RabindraNath Tagore - an event of so great importance that it ought to attract the interest of every student in the University. ಅನೇಕ ವಿದ್ಯಾರ್ಥಿಗಳು ಶಿಕ್ಷಕರು "ತಮ್ಮ ಜೀವನದಲ್ಲಿಯ ಒಂದು, ಮಹಾನ್ ಸೌಭಾಗ್ಯ" ಎಂದು ಟಾಗೂರರ ದರ್ಶನದ ಬಗ್ಗೆ ಉದ್ಗರಿಸಿದ್ದಾರೆ. ಪ್ರಸಿದ್ಧ ಕವಿ ಜಾಯ್ಸ್ ಕಿಲ್ಮರ್ ಟಾಗೂರರನ್ನು ಸಂದರ್ಶಿಸಿ ಅವರ ಮೋಹಕ ವ್ಯಕ್ತಿತ್ವ ಕಂಡು ಎಷ್ಟಾದ 'ಮಹಾನ್ ಕವಿ, ಎಂದು ಮೆಚ್ಚಿ ನುಡಿದರು.

ಆದರೆ ಟಾಗೋರರನ್ನು ಟೀಕಿಸಿದವರೂ ಉಂಟು. ಥಿಯೋಡೋರ್ ಮೇನಾರ್ಡ್ ಅನ್ನುವವನು "ಟಾಗೋರರ ಬಗ್ಗೆ ಅಮೇರಿಕೆಯ ಜನತೆ ಇರಿಸಿ ಅದ್ಭುತ ಕಲ್ಪನೆ ಬರೀ ಭ್ರಮೆ" ಎಂದು ಟೀಕಿಸಿದ್ದಾನೆ. ಸ್ಯಾನ್ ಫ್ರಾನ್ಸಿಸ್ಕೋದಲ್ಲಿ ಓರ್ವ ಪತ್ರಿಕಾ ಪ್ರತಿನಿಧಿ ಟಾಗೂರರನ್ನು "ಅಮೇರಿಕೆಯ ಬಗ್ಗೆ ನಿಮ್ಮ ಅಭಿಪ್ರಾಯವೇನು ?" ಎಂದು ಕೇಳಿದಾಗ ಅವರು ನಿರ್ಭೀತಿಯಿಂದ "ತುಂಬ ಬಲಹೀನ ಮತ್ತು ಅಪಕ್ವ ದೇಶ" ಎಂದರು. ಇದರಿಂದ ಅನೇಕ ಅಮೇರಿಕನ್ನರಿಗೆ ಆಘಾತವಾಗದಿರಲಿಲ್ಲ "Sun" ಎಂಬ ಪತ್ರಿಕೆ ಟಾಗೋರರನ್ನು ಅವರ ಹೇಳಿಕೆಯ ಮೇಲೆ ಅಪ್ಮಾನಿಸಿತು. ದಾನಾ ಬರ್ನೆಟ್ ಅನ್ನುವವರು "Evening News" ನಲ್ಲಿ "ಟಾಗೋರರು ಅಮೇರಿಕೆಯ ಬಗ್ಗೆ ತಪ್ಪು ಹೇಳಿಕೆಯಿತ್ತು ಅವರ ಬಗೆಗೆ ಜನತೆಗಿದ್ದ ಒಳ್ಳೆಯ ಭಾವನೆಗೆ ಚ್ಯುತಿ ಎಂದು ತಂದಿದ್ದಾರೆ' ಎಂದು ಬರೆದು ತಮ್ಮ ಅಸಮಾಧಾನವನ್ನು ಪ್ರದರ್ಶಿಸಿದರು.

ಮತ್ತೊಂದು ಬಾರಿ ಟಾಗೋರರು ಅಮೇರಿಕ ಪ್ರವಾಸ ಕೈಗೊಂಡು ಉಪನ್ಯಾಸ ಮಾಲೆ

# ಮಣ್ಣಿನ ಮಕ್ಕಳ ಮೋಜಿನ ಸರಣಿ

ಸಂಗ್ರಹ: ಕಲ್ಲೇಶ ಇಟಗಿ
ಹಗರಿ ಕ್ಯಾದ್ಗಿಹ

## "ನೆನೆದು ನಾ ಬಂದೆ ತೌರೂರ"

ತಾಯಿನೆನಪಾಗಿ।
ಕಣ್ಣೀರತುಂಬಿ ತವರೂರ, ಮನೆ ನೋಡ ಬಂದೆ ॥೧॥

ಹೆತ್ತ ತಂದೆ ತಾಯಿಗಳ ಪ್ರೀತಿಲಿ।
ಮುತ್ತಿನಂತೆ ಜೋಪಾನಾಗಿ ಬೆಳೆದೆ.॥ ॥೨॥

ಅತ್ತೆ ಮಾವರ ಕಾಟದಲ್ಲಿ ಬಳಲಿ ಬೇಸತ್ತು ಬಂದೇನಮ್ಮ!
ಏನು ಹೇಳಲಿ ಸತ್ತ ತಾಯಿ?
ನಾನೆಂತು ಮರೆಯಾಲಿ?
ಅತ್ತು ಕೊರಗಿ ಮುಳುಗೀದೆ ಕಣ್ಣೀರಿನಲ್ಲಿ ॥ ॥೩॥

ಅಣ್ಣನ ಹೆಂಡತಿ ಕಣ್ಣ ಸನ್ನೆ ಮಾಡಿದಳೆನ್ನ ನೋಡಿ
ಅಣ್ಣ ಮಾತಾಡದೇ ಒಳಗೋಡಿದ।
ತನ್ನ ಸಿರಿಯಲ್ಲಿ ತಾನೆಕೂಡಿದ ॥ ॥೪॥

ಅತ್ತಿಗೆಯ ಕೈಗೊಂಬೆ ನಮ್ಮಣ್ಣ
ಎತ್ತಾಡಿಸಿದ ತಂಗಿಯ ಮರೆತು।
ಇತ್ತಾಗ ಬಾರಮ್ಮ ತಂಗಿಯೆನ ಬಾರದೆ? ॥೫॥

ತಾಯಿ ಇಲ್ಲದ ತವರೂರ ಮನೆಗೆ ಹೆಣ್ಣು
ಬರಬಾರದೆಂದಿಗೂ
ತಾಯಿ ಇದ್ದರೆ ಸಂಪತ್ತು ಹೆಣ್ಣಿಗೆ।
ಮಾಯವಾಗುವುದು ಮನೆ ಬೇಗಿಯು ॥ ॥೬॥

ಹುಟ್ಟಿ ಬೆಳೆದೆನ್ನ ಮನೆಯ ಬಾಗಿಲಿಗೆ
ಕೈಮುಟ್ಟಿ ಶರಣೆಂಬೆ ಇಂದೀಗೆ।
ಎಷ್ಟೇ ಕಷ್ಟವು ಬರಲೆಮಗೆ ಕೊಟ್ಟ
ಗಂಡನ ಮನೆ ಶ್ರೇಷ್ಠ। ॥೭॥

ನಾರಿಗೆ ಕೈಮುಗಿದು ಬೇಡುವೆ ಶಿವಗೆ
ತೌವರೂರ ಸಿರಿ ಬೆಳೆಯಾಲಿ।
ನಮಣ್ಣಾಗೆ ಸತ್ತ ತಾಯಿಯ ನೆನಪಿರಲಿ ಎಂದಿಗೂ
ಕಾಯಿ ಕರಪೂರ ಮಾಡಿಸುವೆ ನಿನಗೆ॥ ॥೮॥

---

(ಪಕ್ಕದ ಪುಟದಿಂದ)

ನಡೆಸಿದರು. ಈಗಿನ ಅವರ ಪ್ರವಾಸದ ಉದ್ದೇಶ ಶಾಂತಿನಿಕೇತನಕ್ಕಾಗಿ ಹಣ ಕೂಡಿಸುವುದಾಗಿತ್ತು. ಆದರೆ ಆಗ ಅಲ್ಲಿಯ ಆ ವಾತಾವರಣ ಪ್ರತಿಕೂಲವಾಗಿ ಪರಿಣಮಿಸಿತು. ಜಾಗತಿಕ ಯುದ್ಧದ ಕಾರ್ಮುಗಿಲು ದಟ್ಟವಾಗಿ ಹಬ್ಬಿದ ಸಮಯವದು. ಅಮೇರಿಕೆಯಾದ್ಯಂತ ಉಲ್ಬಣಿಸಿದ ಪರಿಸ್ಥಿತಿ ನೆಲೆಸಿತ್ತು. ಟಾಗೂರರು ಮನಃಸ್ವಾಸ್ಥ್ಯ ಕಳೆದುಕೊಂಡು ನ್ಯೂಯಾರ್ಕಿನ ಹೋಟೆಲೊಂದರಲ್ಲಿ ದಿನ ಕಳೆಯತೊಡಗಿದರು. ಆಗ ನ್ಯೂಯಾರ್ಕ್ ಟೈಮ್ಸ್ ತನ್ನ ಸಂಚಿಕೆಯಲ್ಲಿ (ನವೆಂಬರ್, 1, 1920) ಟಾಗೋರರ ಯಾತ್ರೆಯ ಉದ್ದೇಶ ವಿವರಿಸಿ ಬರೆದು ಜನರನ್ನು ಎಚ್ಚರಿಸಿತು. ಆಮೇಲೆ ಅಂದರೆ ಡಿಸೆಂಬರ್ 11 ರಂದು ಟಾಗೋರರ ಎರಡು ನಾಟಕಗಳು ರಂಗಭೂಮಿಯಮೇಲೆ ಅಭಿನಯಿಸಲ್ಪಟ್ಟು ಸ್ವಲ್ಪ ದುಡ್ಡು ತಂದುವು. ಆದರೆ ಅವರಿಗೆ ನಿರಾಶೆಯಾಗದಿರಲಿಲ್ಲ. 'ಇಲ್ಲಿ ನನಗೆ ಪೂರ್ಣ ನಿರಾಶೆಯಾಗಿದೆ, ಇಲ್ಲಯ ಜನಗಳಿಗೆ ಯೋಚಿಸುವಷ್ಟು ತಾಳ್ಮೆಯೂ ಇಲ್ಲದಂತಾಗಿದೆ. ಇದಕ್ಕೆ ಕಾರಣ ಇಲ್ಲಿ ಉಲ್ಬಣಗೊಂಡಿರುವ ಪರಿಸ್ಥಿತಿಯೇ ಅದರಿಂದ ನನ್ನ ಹೃದಯವೂ ಘಾಸಿಗೊಂಡಿದೆ'' ಎಂದು ಟಾಗೋರರೇ ಮಿತ್ರರೊಬ್ಬರಿಗೆ ಬರೆದ ಕಾಗದವಲ್ಲಿ ತೋಡಿಕೊಂಡಿದ್ದಾರೆ.

ನಿರಾಶೆ ಹೊತ್ತು ಅವರು ತಾಯ್ನಾಡಿಗೆ ಮರಳಿದರು. ನಂತರ 'ನೌಕಾಘಾತ, 1921 'ಬರಗಾಲದ ಸುಳುಹು

(25 ನೇ ಪುಟ ನೋಡಿ)

ಜಾನಪದ ಜೇನು

# " ನಾ ಹೆಚ್ಚೋ ನಿನ್ನ ತವರೆಚ್ಚೋ "

— ಹೆಚ್. ಎಸ್. ಸಿದ್ಧಗಂಗಪ್ಪ, ಎಂ. ಎ.

ಜಾನಪದ ಸಾಹಿತ್ಯದಲ್ಲಿ ಜೀವನದ ಹಲವು ಹಸ್ನೊಂದು ಮುಖಗಳ ಪರಿಚಯುವನ್ನು ನಮ್ಮ ಜನಪದ ಕವಿಗಳು ಸಹಜವಾಗಿ, ಸರಳವಾಗಿ ಹೃದಯ ಮುಟ್ಟುವಂತೆ, ತಟ್ಟುವಂತೆ ಅಭಿವ್ಯಕ್ತಿಗೊಳಿಸಿದ್ದಾರೆ. ಅಭಿವ್ಯಕ್ತಿ ಅನುಭವಸಾರ ಸಂಗ್ರಹ ಹಾಡಾಗಿ ಚಿಮ್ಮಿದೆ. ಜನಪದ ಕವಿಗಳು ಪತಿ – ಪತ್ನಿಯರ ಸಂಬಂಧವನ್ನೂ, ಪ್ರೀತಿ, ಪ್ರೇಮದ ಬೆಸುಗೆಯುನ್ನೂ ಸೊಗಸಾಗಿ ತ್ರಿಪದಿಗಳ ಮೂಲಕ ವರ್ಣಿಸಿದ್ದಾರೆ.

ಗೃಹಿಣಿಗೆ ಕೈ ಹಿಡಿದ ಗಂಡನೇ ಸ್ವತಃ ಭಾರತೀಯ ಸಂಸ್ಕೃತೀಯ ಪ್ರಕಾರ ಅವನು ಮುತ್ತೈದೆಯ ಭಾಗ್ಯ. ಅವನು ಹೇಗೇ ಇರಲಿ, ಅವಳ ಪಾಲಿಗೆ ಮನ್ಮಥ. ಜನಪದದಲ್ಲಿಯೇ ಒಂದು ಗಾದೆಯಿದೆ. 'ಹೆತ್ತವರಿಗೆ ಹೆಗ್ಗಣ ಮುದ್ದು, ಕೂಡಿದವರಿಗೆ ಕೋಡಗ ಮುದ್ದು' ಎಂದು ಅವನ ಒಂದೊಂದು ನುಡಿಯೂ ಸುಖ ಸಂತೋಷದ ಸೋಪಾನ. ದೈಹಿಕ ಹಾಗೂ ಮಾನಸಿಕ ಶ್ರಮಕ್ಕೆ ಸಂಜೀವಿನಿ. ಬೇರೆಯವರಿಗೆ, ತನ್ನ ಓರಿಯು ಗೆಳತಿಯರಿಗೆ ತನ್ನ ನಲ್ಲನ ಗುಣಗಾನವನ್ನು ಎಷ್ಟು ವರ್ಣಿಸಿದರೂ ಕಡಿಮೆಯೇ.

ಎಲ್ಲೆಲ್ಲಿ ನೋಡಿದರೆ ನಲ್ಲನಂಥವರಿಲ್ಲ
ಹಲ್ಲು ನೋಡಿದರ ಹವಳ್ಯಾವು ।ನಲ್ಲನ
ಸೊಲ್ಲು ಕೇಳಿದರ ಸಮಾಧಾನ ॥

ನಲ್ಲನಿಗೂ ಅಷ್ಟೇ ಅಭಿಮಾನ, ಪ್ರೇಮ; ತನ್ನ ಜೀವನ ಸಂಗಾತಿಯಾಗಿ ಕಷ್ಟ ಸುಖಗಳನ್ನು ಸಮನಾಗಿ ಹಂಚಿಕೊಳ್ಳುವ ಪ್ರಿಯತಮೆಯ ಬಗ್ಗೆ. ಮುಚ್ಚಂಜೆಯವರೆಗೂ ಹೊಲದಲ್ಲಿ ಬೆವರು ಸುರಿಸಿ ಬಂದ ಅವನಿಗೆ ನಲ್ಲೆಯ ಹೂ ನಗೆಯ ಪ್ರೀತಿಯ ಮಾತುಗಳು ಆಯಾಸವನ್ನು ಪರಿಹಾರ ಮಾಡಿ ಚೈತನ್ಯವನ್ನು ನೀಡುತ್ತವೆ. ಒಂದು ದಿನವೂ ಅಗಲಲಾರದಷ್ಟು ದಾಂಪತ್ಯ ಜೀವನ ಒಂದೆರಡು ದಿನ ಹೆಂಡತಿ ತೌರು ಮನೆಗೆ ಹೋದಾಗ ಅವನ ಮಾನಸಿಕ ತೊಳಲಾಟ ಹೇಳತೀರದು. ಬೆಳಗಿನಿಂದ ಸಂಜೆಯವರೆಗೂ ಅವಳ ಬರುವಿಕೆಯನ್ನು ಎದುರು ನೋಡಿ, ನೋಡಿ ಬೇಸತ್ತು, ವಿರಹ ವೇದನೆಯನ್ನು ತಾಳಲಾರದೆ

ಕಮಲದ ಹೂ ನಿನ್ನ ಕಾಣದೆ ಇರಲಾರೆ
ಮಲ್ಲಿಗೆ ಮಾಯ ಬಿಡಲಾರೆ। ಕೇದಿಗೆ
ಗರಿ ನಿನ್ನಗಲಿ ಇರಲಾರೆ ॥

ಎಂದು ಹಾಡುತ್ತಾನೆ. ಅವರದು ಎಂಥ ಸಾಮರಸ್ಯ ದಾಂಪತ್ಯ ಜೀವನ !

ತಂದೆ ತಾಯಿಗಳು ಮಮತೆಯ ಮಡಿಲಲ್ಲಿ ಸಾಕಿ ಬೆಳೆಸಿದ ಮಗಳನ್ನು ನೆರೆಮನೆಗೆ ಧಾರೆ ಎರೆದು ಕೊಡುವ ಮುನ್ನ ಹಲವಾರು ಸಲ ಯೋಚಿಸಿ ನಿರ್ಧಾರಕ್ಕೆ ಬರುತ್ತಾರೆ. 'ಜಲ ನೋಡಿ ಬಾವಿ ತೆಗೆಯಬೇಕಂತೆ, ಕುಲ ನೋಡಿ ಹೆಣ್ಣು ತರಬೇಕಂತೆ, ಅಂತೆಯೇ ಕುಲ ನೋಡಿ, ಸ್ಥಿತಿ ಗತಿಯನ್ನು ಗಮನಿಸಿ ಹೆಣ್ಣನ್ನು ಕೊಡಬೇಕಂತೆ. ಕೆಲವು ಸಾರಿ ಕುಲ ಒಳ್ಳೆಯದಾಗಿರುತ್ತದೆ; ಆದರೆ ಜೀವನ ಸಾಗಿಸ

ದಷ್ಟು ನಿರ್ಗತಿಕರಾಗಿರುತ್ತಾರೆ. ಹಲವು ವೇಳೆ ನಡತೆ ಸರಿಯಿಲ್ಲದ ಶ್ರೀಮಂತರು ಸಿಗುತ್ತಾರೆ. ಒಬ್ಬ ಹೆಣ್ಣು ಮಗಳು ಹಣವಂತನಲ್ಲದ ಗುಣವಂತನ ಕೈ ಹಿಡಿಯುತ್ತಾಳೆ. ಕೈ ಹಿಡಿದ ಗಂಡ ಬಡವನೆಂಬ ಭಾವನೆಯೇ ಅವಳಲ್ಲಿ ಬರುವುದಿಲ್ಲ. ಅಕ್ಕ ಪಕ್ಕದ ಮನೆಯವರು, ಸಂಬಂಧಿಕರು ಬಡವರೆಂದು ಅಸಡ್ಡೆ ತೋರಿಸಿದಾಗ ತನ್ನ ಭಾವಶ್ರೀಮಂತಿಕೆಯಿಂದ ಛೇಡಿಸಿದವರ ಬಾಯಿ ಮುಚ್ಚಿಸುತ್ತಾಳೆ

ಕೂಲಿ ಮಾಡಿದರೇನ ಕೋರಿ ಹೊತ್ತರೇನ
ನಮಗೆ ಸಮರಾಯ ಒಡವೇನ। ಬಂಗಾರ
ಮಾಲ ಇದ್ದಾಂಗ ಮನಿಯಾಗ॥

ಭಾವಶ್ರೀಮಂತಿಕೆಯಿಂದ ಕೂಡಿರುವ ಈ ಗ್ರಾಮೀಣ ಹೆಣ್ಣು ಮಗಳು ಯಾವ ನಾಗರಿಕ ಸುಸಂಸ್ಕೃತಿಕ ಹೆಣ್ಣಿಗೆ ಕಡಿಮೆ ?

ಸಂಸಾರದ ರಥ ಸದಾ ಟಾರು ರಸ್ತೆಯ ಮೇಲೆಯೇ ಚಲಿಸುವುದಿಲ್ಲ. ಕೆಲವು ಸಮಯದಲ್ಲಿ ತಗ್ಗು ದಿಣ್ಣೆಗಳಿಂದ ಕೂಡಿದ ಕೊರಕಲು ಮಣ್ಣಿನ ರಸ್ತೆಯ ಮೇಲೂ ಹೋಗಬೇಕಾಗುತ್ತದೆ. ಅನಿವಾರ್ಯವಾಗಿ ಯಾವುದೇ ಕಾರಣಕ್ಕಾಗಿ ಒಮ್ಮೊಮ್ಮೆ ಗಂಡ ಹೆಂಡತಿಯ ಮಧ್ಯೆ ಬಿರುಕು ಉಂಟಾಗುತ್ತದೆ. ಒಮ್ಮೆ ಹೆಂಡತಿಗೆ ತವರಿಗೆ ಹೋಗುವ ಬಯಕೆಯಾಗುತ್ತದೆ. ಹೋಗಿ ಬರಲು ಗಂಡನನ್ನು ಕೇಳುತ್ತಾಳೆ. ಆಗ ಬಿತ್ತನೆಯ ಕಾಲ. ಬಿತ್ತನೆಯ ಕಾರ್ಯ ಮುಗಿದ ಮೇಲೆ ಮುಂಬರುವ ಗೌರಿ ಹಬ್ಬಕ್ಕೆ ಹೋಗುವಿಯಂತೆ ಎಂದು ಹೇಳಿದಾಗ, ಹೋಗಬೇಕೆಂದು ಹಟ ಹಿಡಿಯುತ್ತಾಳೆ. ಅವನಿಗೆ ಸಹನೆಯ ಕಟ್ಟೆ ಒಡೆಯುತ್ತದೆ. ಕೋಪದ ಹೊಗೆಯಾಡುತ್ತದೆ. ಮೂಲೆಯಲ್ಲಿ ಕಂಡೂ ಕಾಣದಂತೆ ಬಿದ್ದಿದ್ದ ದೊಣ್ಣೆಯನ್ನು ತೆಗೆದುಕೊಂಡು ಕೋಪದ ಕಾವು ಆರುವವರಿಗೆ ದನ ಬಡಿಯುವಂತೆ ಬಡಿಯುತ್ತಾನೆ ಆಗ ಅವಳಿಗೆ ಮಾತು ಮೌನವಾಗುತ್ತದೆ. ಕಣ್ಣಲ್ಲಿ ಕಂಬನಿ ಧಾರಾಕಾರವಾಗಿ ಹರಿಯುತ್ತದೆ. ಗಂಡನಿಗೆ ಕೋಪ ತಣ್ಣಗಾಗಿ ತಾನು ಮಾಡಿದ ಅವಿವೇಕಕ್ಕಾಗಿ ಪಶ್ಚಾತ್ತಾಪ ಪಡುತ್ತಾನೆ. ಆಗಿನ ಅವನ ಮಾನಸಿಕ ಸ್ಥಿತಿಯನ್ನು ನಮ್ಮ ಜನಪದ ಕವಿಗಳು ಸೊಗಸಾಗಿ ಚಿತ್ರಿಸಿದ್ದಾರೆ.

ಮಡದೀನ ಬಡಿದಾನ ಮನದಾಗ ಮರುಗ್ಯಾನ
ಒಳಗ್ಹೋಗಿ ಸೆರಗ ಹಿಡಿದಾನ। ಕೇಳ್ಯಾನ
ನಾನ್ಹೆಚ್ಚೋ, ನಿನ್ನ ತವರ್ಹೆಚ್ಚೋ॥

ಅದೇ ಸಮಯಕ್ಕೆ ಸರಿಯಾಗಿ ಮಗಳನ್ನು ಕೆಲವು ದಿನಗಳು ತವರು ಮನೆಗೆ ಕರೆದುಕೊಂಡು ಹೋಗಲು ತಾಯಿ ಬರುತ್ತಾಳೆ. ಆಗತಾನೇ ರಕ್ತ ಹೆಪ್ಪುಗಟ್ಟುವಂತೆ ಹೊಡೆತತಿಂದಿದ್ದರೂ ದುಃಖವನ್ನು ನುಂಗಿ, ನಗುಮುಖದಿಂದ ಸ್ವಾಗತಿಸುತ್ತಾಳೆ. ತಾಯಿ ತಾನು ಬಂದ ಉದ್ದೇಶವನ್ನು ತಿಳಿಸಿದಾಗ, ನವುರಾಗಿ ತಿರಸ್ಕರಿಸುತ್ತಾಳೆ. ನನ್ನನ್ನು ಸುಖವಾಗಿ ಕುಡಿದ ನೀರು ಅಲುಗಾಡದಂತೆ ನೋಡಿಕೊಳ್ಳುತ್ತಿದ್ದಾರೆ. ಯಾವುದಕ್ಕೂ ನನಗಿಲ್ಲಿ ಕೊರತೆಯಿಲ್ಲ ಎಂದು ಹೇಳಿ, ಕೊಟ್ಟ ಮನೆಗೆ ತಂದ ಮನೆಗೆ ಕೀರ್ತಿಯನ್ನು ತರುತ್ತಾಳೆ. ಅವಳ ಸಹನೆ ಅಪಾರವಾದುದು. ಅವಳ ಒಂದೊಂದು ನುಡಿ ಮುತ್ತುಗಳು ಸಂಸ್ಕೃತಿಯ ದ್ಯೋತಕ.

ಹಚ್ಚಡದ ಪದರಾಗ ಅಚ್ಚ ಮಲ್ಲಿಗೆ ಹೂವ
ಬಿಚ್ಚಿ ನನ ಮ್ಯಾಲೆ ಒಗೆವಂಥ। ಕಾಯರನ
ಬಿಟ್ಹ್ಯಾಂಗ ಬರಲೆ ಹಡದವ್ವ ?

ಮಗಳ ಬದುಕನ್ನು ಕಂಡ ತಾಯಿಗೆ ಸಂತೋಷವಾಗುತ್ತದೆ. ಸುಖವಾಗಿ ನೂರು ವರುಷ ಬಾಳು ಎಂದು ಹರಸಿ ಊರಿಗೆ ಹಿಂದಿರುಗುತ್ತಾಳೆ. ಇದೆಲ್ಲವನ್ನೂ ಗಮನಿಸಿದ ಪತಿರಾಯ ತನ್ನ ಗೌರವವನ್ನು ಉಳಿಸಿದ್ದಕ್ಕಾಗಿ ಸಂತೋಷಪಡುತ್ತಾ, ತಾನು ಅವಿವೇಕದಿಂದ ವರ್ತಿಸಿದ್ದಕ್ಕಾಗಿ ಕ್ಷಮೆ ಕೋರುತ್ತಾನೆ. ಗಂಡನ ಮಾತಿನಿಂದ ಅವಳ ಹೃದಯ ಹಗುರವಾಗುತ್ತದೆ, ನೋವು ಮಾಯವಾಗುತ್ತದೆ, ಮುಖದಲ್ಲಿ ತೃಪ್ತಿಯ ನಗೆ ಕಾಣಿಸಿಕೊಳ್ಳುತ್ತದೆ. ಸ್ವಲ್ಪ ಹೊತ್ತಿನ ಮೇಲೆ ಹಿಂದೆ ಇದ್ದ ವೈಮನಸ್ಯದ ಕಾರ್ಮೋಡ ಕರಗಿ, ಮತ್ತೆ ಹೂನಗೆಯ ತಿಳಿ ಮುಗಿಲು ಕಾಣಿಸಿಕೊಳ್ಳುತ್ತದೆ. ಅವರ ಆಗಿನ ಸ್ಥಿತಿಯನ್ನು ಸುಂದರವಾಗಿ ಚಿತ್ರಿಸಿದ್ದಾರೆ ನಮ್ಮ ಗ್ರಾಮೀಣ ಕವಿಗಳು. (25 ನೇ ಪುಟನೋಡಿ)

## ಕಾವ್ಯವಾಹಿನಿ



# ಭಯ—ಅಭಯ

—"ರಸಿಕರಂಗ"

ಕತ್ತಲೆಯು ಕಂಗೆಡಿಪ ಪರಿಸರದಿ
ಸುತ್ತಲೂ ಸುಳಿಯುತಿಹ
ನೂರಾರು ಹುಸಿಹಾವುಗಳ ನಡುವೆ
ಹೆದ ಹೆದರಿ ತೆವಳುತಿದೆ ಈ ಬದುಕು.

ಚಣ ಚಣಕೆ ಎಣಿಸುತಿದೆ:
ಇಲ್ಲವಾದರೆ ಇದ್ದವರ ಗತಿಯೇನು ?
ಮೈ ನಡುಗಿ ಹೌಹಾರಿ
ಕಲ್ಪನೆಯ ಕರಾಳ ಚಿತ್ರಗಳ
ಬಯಲ ತೆರೆಯ ಮೇಲೆ ಬರೆದು
ನೋಡಲಾರದೆ ನೋಡಿ ಅಭೋ ಎಂದು
ಗೋಗರೆಯುತಿದೆ.

ಅನುಭವದ ಹಾಲುಗಡಲಿನಲಿ
ಆಲೋಚನೆಯ ಕಡೆಗೋಲಿನಲಿ
ಕಡೆದು ತೆಗೆದ ತಿಳಿವಿನ ರನ್ನ
ಕಳೆಗೆಟ್ಟು ರಸಾತಳದಿ ಮುಳುಗುತಿದೆ
ನಂಬಿಕೆಯ ಅಂಬಿಕೆಯ ಆಸರೆಯು ತಪ್ಪಿ ಸರಿಡೊಡನೆ
ಸುಂಟರೆಯು ತುಂಟನ ಕೈಗೆ ಸಿಕ್ಕ
ತರಗೆಲೆಯಾಗಿ ಬಾಳು ತಿರಿಯುತಿದೆ
ನಿಚ್ಚ ಜಾನದಿ ತಣ್ಣದ ನೆಲೆ ಕಂಡ ಜೀವ
ತತ್ತರಿಸಿ ಕುಸಿ ಬೀಳುತಿದೆ
ತನ್ನೊಂದು ಎತ್ತರದಿ ನೆಲಸಿ ಹೊಳೆದು ಬೀಳುವ
ಚಿಕ್ಕೆಯಂತೆ.

ಈ ಎಲ್ಲ ಭಯದ ಮಧ್ಯದಲಿ
ಅದುಭುತದ ಅಭಯ ಹಸ್ತ
ನಭದಂತೆ ಎಲ್ಲೆಡೆಗೆ ಆವರಿಸಿ
ಚಿತ್ತದ ಸುತ್ತು ಕಾವಲದ ಕೋಟೆ ರಚಿಸಿ
ಹೇಳುತಿದೆ ಮೆಲುದನಿಯಲ್ಲಿ
'ಅವರವರ ಕಜ್ಜ ಮುಗಿದೊಡನೆ
ಅಳಿವು ತಪ್ಪದು, ಅದಕೇಕೆ ತಲ್ಲಣ?
ಅಳಿವೆಂಬುದೇ ಸುಳ್ಳು, ಉಳಿವು ದಿಟ ದಿಟವು
ಪೂರ್ಣತೆಗಾಗಿ ನಿರವಿಸಿದ ರಂಗ ಮಂದಿರದಿ
ವಹಿಸುವ ಪಾತ್ರ ಹಲವು, ಪಾತ್ರಧಾರಿ ತಾನೊಬ್ಬನೆ.

—

# ಕೈಯ ಮುಗಿದೆ

—"ಸತ್ಯಶ್ರೀ"

ಮಾವಿನಂಪು ಮುಗುಳು ಕಂಪು
ಕುವ್ವು ಕುವ್ವು ಹಕ್ಕಿ ಇಂಪು
ಜೀಕು ಜಿಯ್ಯೋ ಎಲರ ಸೊಂಪು
ಎಂಥ ಪೆಂಪು ಮನದ ಮೇರೆಗೆ!

ಆನೆಯಾದ ಬಾನ ಮುಗಿಲು
ಮಾಲೆಯಾಗಿ ಮುಂದೆ ಸಾಗಿ
ನಿತ್ಯ ರೂಪಿ ದೇವನಲ್ಲಿ ಲೀನವಾಯಿತು
ತಾನತಾನ ರಾಗವಾಯಿತು

'ಬಂದೆ ನಿಲ್ಲು' ಎನ್ನುವಂತೆ
ಹರಿಯುತಿತ್ತು ಝುರಿಯ ನೀರು
ಪುಟಿದು ಸಿಡಿದ ಅಂಬು ಬಿಂದು
ಅವನಿಗಾಯ್ತು ಮುತ್ತಿನಾರತಿ

ಕಣ್ಣು ಮುಚ್ಚಿ ಬಗೆಯ ತೆರೆದು ಕೈಯ ಮುಗಿದೆನು
ಅರ್ಥವೇನೊ ಭಾವವೇನೊ ಅರಿಯದಾದೆನು. —

# ಕನ್ನಡ ಸಾಹಿತ್ಯದಲ್ಲಿ ಪದ್ಯ ರಚನೆ

— ಕೆ. ಎಸ್. ರಾಮಚಂದ್ರರಾವ್.

ಪ್ರಪಂಚದ ಪ್ರತಿ ಭಾಷಾ ಸಾಹಿತ್ಯದಲ್ಲೂ, ಗದ್ಯ ಮತ್ತು ಪದ್ಯ ರಚನೆಗಳಿರುವುದು ಸರ್ವವೇದ್ಯ. ಎರಡರಲ್ಲೂ ಮಹತ್ತರ ಕಾವ್ಯ ರಚನೆಗಳಾಗಿವೆ. ಇದರಿಂದ ನಮಗೆ ಕಾಣುವುದು, ಗದ್ಯ ರಚನಾರೀತಿಯೇ ಬೇರೆ, ಪದ್ಯ ರಚನಾ ರೂಪವೇ ಬೇರೆ, ಎಂದು. ಗದ್ಯ ರಚನೆಯಲ್ಲಿ ನಿಯಮ ನಿಬಂಧನೆಗಳಿಲ್ಲ; ಸಾಹಿತ್ಯ ಭಾಗ ಉತ್ತಮ ರೀತಿಯಲ್ಲಿರಬೇಕು. ಆದರೆ, ಪದ್ಯರಚನೆಯಲ್ಲಿ ಸಾಹಿತ್ಯ ಭಾಗವೂ ಉತ್ತಮವಾಗಿರಬೇಕಲ್ಲದೆ, ಗೊತ್ತಾದ ಕಟ್ಟು-ನಿಬಂಧನೆಗಳಿಗೆ ಒಳಗಾಗಿರಬೇಕು; ಇವುಗಳನ್ನು ಮೀರಿ ರಚಿಸಲಾಗುವುದಿಲ್ಲ. ಇದರಿಂದಲೇ ಗದ್ಯಭಾಗ ಮತ್ತು ಪದ್ಯ ಭಾಗವೆಂದು ಬೇರ್ಪಟ್ಟಿರುವುದು.

ಪದ್ಯ ರಚನೆಯಲ್ಲಿ, ಪ್ರಾಚೀನ ಪದ್ಧತಿಗಳಿವೆ. ಯಾವ ಪದ್ಧತಿಯೇ ಆದರೂ, ತನ್ನದೇ ಆದ ಕಟ್ಟು ನಿಬಂಧನೆ ಅಥವಾ ಛಂದಸ್ಸಿಗೆ ಒಳಗಾಗಿರುತ್ತದೆ. ಪ್ರಾಚೀನ ಪದ್ಯ ರಚನಾ ಪದ್ಧತಿಯನ್ನು ಯಾರೂ ತೆಗಳುವಂತಿಲ್ಲ. ಅವುಗಳೆಲ್ಲವೂ ಛಂದೋನಿಯಮಗಳಿಗನುಸಾರವಾಗಿರುತ್ತವೆ. ಪೂರ್ವ ಪದ್ಧತಿಯಲ್ಲಿ ಅನೇಕ ಛಂದಸ್ಸುಗಳಿವೆ. ಇದಕ್ಕಾಗಿ, ಛಂದಶ್ಶಾಸ್ತ್ರವೇ ರೂಪಿತವಾಗಿದೆ. ಛಂದಸ್ಸಿಗೆ ಒಳಪಟ್ಟು ರಚಿತತಕ್ಕವುಗಳು ಪದ್ಯಗಳೇ ಹೊರತು, ಇದರಿಂದ ಹೊರತಾದ ಪದ್ಯಗಳನ್ನು ಪದ್ಯವೇಷಧಾರಿಯಾದ ಗದ್ಯವೆಂದೇ ಕರೆಯಬೇಕಾಗುತ್ತದೆ. ಯಾವ ವ್ಯಕ್ತಿಗೆ ಛಂದೋನಿಯಮಗಳಲ್ಲಿ ವಿಶ್ವಾಸವಿರುವುದೋ, ಆ ವ್ಯಕ್ತಿಯು ಛಂದೋ ನಿಯಮವನ್ನು ಮೀರಿದ, ಯಾವ ನವೀನ ರೀತಿಯ ಪದ್ಯ ರಚನೆಯನ್ನೂ' (ಅದರಲ್ಲೂ ನವ್ಯ ಕವಿತೆ) ಸ್ವಾಗತಿಸಲಾರ.

ಪ್ರಕೃತದಲ್ಲಿ, ಈಗಿನ ಅನೇಕ ಸಾಹಿತಿಗಳು, ತಮ್ಮದೇ ಆದ ನೂತನ ರೀತಿಯ ವಿವಿಧ ಛಂದಸ್ಸಿನಲ್ಲಿ ತಂತಮ್ಮ ಕೃತಿಗಳನ್ನು ರಚಿಸಿದ್ದಾರೆ. ಅನೇಕ ಕೃತಿಗಳು, ವಿಷಯದಲ್ಲೂ ಮತ್ತು ಛಂದಸ್ಸಿನಲ್ಲೂ ನವೀನವೇ ಆದರೂ, ತಮ್ಮವೇ ಆದ ಛಂದೋನಿಯಮಗಳಿಗೆ ಮೀರದಂತೆ, ವೈಶಿಷ್ಟ್ಯದಿಂದ ಕೂಡಿವೆ. ಇದರಿಂದ ಅವುಗಳು, ವಿಷಯ ಮತ್ತು ಛಂದಸ್ಸುಗಳಲ್ಲಿ ನವ್ಯವಾದರೂ, ಪರಿಪುಷ್ಟವೂ, ಸ್ವಪೂರ್ಣವೂ ಆಗಿವೆ. ಇಂತಹ ಅನೇಕ ಪದ್ಯ ಕೃತಿಗಳು ಉನ್ನತ ಮಟ್ಟದಲ್ಲಿದ್ದು, ಬಹು ಮಾನ್ಯವಾಗಿವೆ.

ಈಚಿನ ಅನೇಕ ಕಿರಿಯ ಮತ್ತು ಹಲವು-ಹಿರಿಯ ಸಾಹಿತಿಗಳು, ಪದ್ಯ ರಚನೆಗೆ ಅತಿ ನೂತನ ಮಾರ್ಗವನ್ನು ಅವಲಂಬಿಸಿದ್ದಾರೆ. ಇವುಗಳನ್ನು ಇಲ್ಲಿ ಉದಾಹರಿಸುವುದು, ಅನವಶ್ಯಕ. ನಮ್ಮ ಮಾರ್ಗವೆಂದು, ಛಂದಸ್ಸಿನ ರಚನೆ ಹೇಗೆ ಬೇಕಾದರೂ ಇರಬಹುದೇ ? ನೂತನ ಛಂದಸ್ಸಾದರೂ, ಒಂದು ಗೊತ್ತಾದ ಮಟ್ಟವಾದರೂ ಬೇಡವೇ? ಪ್ರಾಸವಿಲ್ಲದಿದ್ದರೂ ಚಿಂತೆಯಿಲ್ಲ; ಆದರೆ, ಆದರ ಮಾತ್ರಾ-ಗಣಗಳು ಮತ್ತು ಪಾದಗಳು ಗೊತ್ತಾದ ಎಣಿಕೆಗೆ ಸಿಕ್ಕ ಬೇಡವೇ? ಇವುಗಳಿಗೆ ಯಾವುದೇ ಒಂದು ನೀತಿ-ನಿಬಂಧನೆಗಳಿಲ್ಲ. ಪದ್ಯ ಅಥವಾ ಕವಿತೆಯೆಂದು ಕರೆಸಿಕೊಳ್ಳಲು, ಮುಖ್ಯವಾದ ಮಾತ್ರಾ

ಪ್ರಾಸಗಳೇ ಇರುವುದಿಲ್ಲ. ಒಂದೊಂದು ಪದ್ಯ ಇಷ್ಟೇ ಪಾದಗಳಿರಬೇಕೆಂಬ ನಿಯಮವೂ ಇಲ್ಲ ತ್ತ ಒಂದೊಂದು ಪಾದದಲ್ಲೂ, ಇಷ್ಟೇ ಮಾತ್ರಾ-ಳಿರಬೇಕೆಂಬ ನೀತಿಯೂ ಇಲ್ಲ. ಇಂತಹವು ನ್ನು ಪದ್ಯ ಅಥವಾ ಕವನವೆಂದು ಹೇಗೆ ಕರೆಯು ? ಪದ್ಯ ರಚನಾ ಪ್ರಯತ್ನದಲ್ಲಿ ಇದೊಂದು ಮಾರ್ಗವಲ್ಲವೆ? –ಇದೇ ಒಂದು ದೊಡ್ಡ ಪ್ರಶ್ನೆ ದೆ. ನವ್ಯಮಾರ್ಗದಿಂದ ಕೂಡಿದ ಅನೇಕ ಗಳಲ್ಲಿ, ಗದ್ಯ ರೂಪವೇ ತೋರಿಬರುತ್ತದೆ. ಕಾರಣ, ತ್ರಾ-ಗಣ-ಪ್ರಾಸಗಳಿಲ್ಲದೆ, ಗೊತ್ತಾದ ಛಂದಸ್ಸಿಗೆ ಳಾಗಿರುವುದರಿಂದ. ಈ ನವ್ಯಮಾರ್ಗವನ್ನು ರು ಹೇಳುವಂತೆ "ಕ್ರಾಂತಿ ಮಾರ್ಗವೆಂದು ಲಾಗದು. ಮಾತ್ರಾ, ಗಣ-ಪ್ರಾಸಗಳಿಂದ ದ, ಅಚ್ಚು ಕಟ್ಟಾದ ಪದ್ಯ ರಚನೆಯನ್ನು ಲು ಸಮರ್ಥರಾಗದೆ, ಸೋತು, ಈ ನವ್ಯ ರ್ಗಕ್ಕೆ ಶರಣಾಗತರಾಗಿರುವರೆಂದು ಹೇಳದೆ ತರವಿಲ್ಲ. ಇದನ್ನು 'ನೂತನಮಾರ್ಗ' ವೆಂದು ವುದಕ್ಕಿಂತ, "ಸೋತವರ ಮಾರ್ಗ" ವೆಂದು , ಹೆಚ್ಚು ಒಪ್ಪುತ್ತದೇನೋ ! ಪದ್ಯ ಅಥವಾ ವೆಂದರೆ, ಮಾತ್ರಾ–ಗಣ–ಪ್ರಾಸಗಳಿಂದ ಕೂಡಿ. ವಿನಾ, ಅವುಗಳಿಂದ ಹೊರತಾದುವಲ್ಲ. ನ ಮಾರ್ಗವೇ ಆಗಲೀ, ಅರ್ವಾಚೀನ ವೇ ಆಗಲೀ, ಪದ್ಯರಚನೆಗಳು, ನಿಯಮ-ನಿಬಂಧ ದ ಕೂಡಿ, ಛಂದೋಬದ್ಧವಾಗಿರಬೇಕು.

ಸಂಗೀತ ಕಲೆಯಲ್ಲಿ, ಮೇಳ (ಶ್ರುತಿ) ಹೇಗೆ ಅತ್ಯವಶ್ಯಕವೋ, ಮತ್ತು ಅವುಗಳಿ ಂಗೀತ ಹೇಗೆ ಶೋಭಿಸುವುದಿಲ್ಲವೋ, ೀ, ಪದ್ಯ ಅಥವಾ ಕವಿತಾರಚನೆಯಲ್ಲೂ, -ಗಣ, ಪ್ರಾಸಗಳೂ ಅತಿ ಮುಖ್ಯ. ಗಣಗಳನ್ನು ಲಯ(ತಾಳ)ಕ್ಕೂ, ಪ್ರಾಸಗ ಶ್ರುತಿಗೂ ಚೆನ್ನಾಗಿ ಹೋಲಿಸಬಹುದು. ಇದು ದ ಮಾತು. ಹೇಗೆಂದರೆ, ಮಾತ್ರಾ-ಗಣ ಕೂಡಿದ ಪಾದಗಳ, ತಾಳದ ಕಟ್ಟಿಗೆ ಸಿಗುತ್ತವೆ. ಮತ್ತು ಹಾಡಿಕೆಯಲ್ಲಿ ಅಥವಾ ವಾದ್ಯಗಳನ್ನು ನುಡಿಸುವಾಗ, ಶ್ರುತಿಯು ಸದಾ ಮೊರೆಯುವಂತೆ, ಪದ್ಯಗಳಲ್ಲಿ, ಪ್ರಾಸಾಕ್ಷರಗಳು, ಶ್ರುತಿಯಂತೆ, ಕೇಳಿಸುತ್ತವೆ; ಕಾರಣ, ಒಂದೇ ರೀತಿಯ ಅಕ್ಷರಗಳು ಆಗಾಗ್ಗೆ, ಕ್ರಮವಾಗಿ ಬರುವುದರಿಂದ, ಸಂಗೀತದಲ್ಲಿ "ಶ್ರುತಿರ್ಮಾತಾ ಲಯಃಪಿತಾ" ಎಂದು ಹೇಳುವಂತೆ, ಪದ್ಯ ಕಲೆಯಲ್ಲಿ, ಮಾತ್ರ-ಗಣಕ್ಕೆ ಪಿತೃಸ್ಥಾನವನ್ನೂ, ಪ್ರಾಸಕ್ಕೆ ಮಾತೃಸ್ಥಾನವನ್ನೂ ನೀಡಬಹುದಾಗಿದೆ. ಯಾವ ರೀತಿ, ಮಾತಾ–ಪಿತೃಗಳಿಲ್ಲದ ಶಿಶು, ಅನಾಥವಾಗಿ, ಯಾರಿಂದಲೂ ಪೋಷಿಸಲ್ಪಡದೆ ಎಲ್ಲರಿಂದಲೂ ತಿರಸ್ಕೃತವೋ, ಅಂತೆಯೇ, ಮಾತ್ರಾ-ಗಣ ಮತ್ತು ಪ್ರಾಸರಾಹಿತ್ಯವಾದ ಪದ್ಯಕೃತಿಗಳು ಶೋಭಿಸದೆ, ಚಲನ ಚಿತ್ರ ಗೀತೆಗಳಂತೆ, ನಶ್ವರವಾಗುವುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಒಟ್ಟಿನಲ್ಲಿ, ಛಂದೋನಿಯಮಗಳಿಂದ ಕೂಡಿದ ಪದ್ಯ-ಕೃತಿಗಳೇ ಅಮರವಾಗಬಲ್ಲವು. ಸದ್ಗೃಹಸ್ಥೆಯೆಂದು ಕರೆಯಬೇಕಾದರೆ, ಯಾವ ಸಲ್ಲಕ್ಷಣಗಳನ್ನು ನಾವು ಒಬ್ಬ ಸ್ತ್ರೀಯಲ್ಲಿ ಕಾಣಬಯಸುತ್ತೇವೆಯೋ, ಉತ್ತಮ ಪದ್ಯಕೃತಿ (ವಿಷಯವೂ ಸೇರಿ) ಎಂದು ಕರೆಯಬೇಕಾದರೆ, ಅದು ಮಾತ್ರಾ-ಗಣ, ಪ್ರಾಸವಿತ್ಯಾದಿಗಳಿಂದ ಕೂಡಿರಲೇಬೇಕು.

ಶತಮಾನಗಳ ಹಿಂದೆ, ಹರಿಹರ ಮಹಾಕವಿಯೂ ಸಹ "ರಗಳೆ" ಎಂಬ ನೂತನ ಛಂದಸ್ಸಿನಲ್ಲಿ ಕಾವ್ಯಗಳನ್ನು ಸೃಷ್ಟಿಸಿದ. ಆಗಿನ ಕಾಲಕ್ಕೆ ಇದು ನವೀನ ರೀತಿಯ ಛಂದಸ್ಸೇ ಆಗಿತ್ತು. ಇದರಲ್ಲಿ ಪ್ರಾಸಕ್ಕೆ ಪ್ರಾಧಾನ್ಯವಿಲ್ಲದಿದ್ದರೂ, ಮಾತ್ರಾ ಗಣಗಳಿಂದ ಕೂಡಿದ ಛಂದಸ್ಸೇ ಆಗಿದೆ. ಒಂದೊಂದು ಪಾದದಲ್ಲೂ ಇಂತಿಷ್ಟೇ ಮಾತ್ರೆಗಳಿಂದ ಕೂಡಿದ, ಇಂತಿಷ್ಟೇ ಗಣಗಳಿರಬೇಕೆಂಬ ನಿಯಮವಿದೆ. ಈ ರೀತಿಯಲ್ಲಿ, ಪದ್ಯ ರಚನೆ ಎಂದರೆ, ಯಾವುದಾದರೂ ಕ್ರಮಬದ್ಧವಾದ ಛಂದಸ್ಸಿನಲ್ಲಿದ್ದರೆ, ಚನ್ನ. ಯಾವ ಕ್ರಮಕ್ಕೂ ಬದ್ಧವಾಗಿರದ ಪದ್ಯ ರಚನಾಕ್ರಮಕ್ಕೆ ಏನೆನ್ನಬೇಕು?

(24 ನೇ ಪುಟ ನೋಡಿ)

# ಅಶೋಕನ ಧರ್ಮ ಚಕ್ರ ಸಂದೇಶ

— ಎಸ್. ರಾಜಶೇಖರಯ್ಯ

"ಇಂದು ನಾನು ಆಚರಿಸುತ್ತಿರುವ ಅಹಿಂಸೆಯ ಫಲವಾಗಿ, ಯುದ್ಧ ಕಹಳೆಯ ಸದ್ದಡಗಿ, ಧರ್ಮಸಂದೇಶ ಎಲ್ಲೆಲ್ಲಿಯೂ ಪ್ರತಿಧ್ವನಿಸುತ್ತಿದೆ" (ಶಿಲಾ ಶಾಸನIV) ಭಾರತದ ರಾಷ್ಟ್ರೀಯ ಧ್ವಜವನ್ನಲಂಕರಿಸಿರುವ ಅಶೋಕಚಕ್ರ, ಪೂರ್ವಪಶ್ಚಿಮ ದೇಶಗಳ ಸಮಾಗಮವನ್ನು ಜ್ಞಾಪಿಸುತ್ತದೆ. ಇದರಿಂದಾಗಿ ಆಯುಧಗಳು ನಿರುಪಯೋಗವಾದವು. ಸರೋವರದ ಕಮಲದಂತೆ ಶಾಂತಿ ಸಂದೇಶ ಅರಳಿತು. ಮನಸ್ಸು ಮಾಡಿದ್ದರೆ ಅಶೋಕ ಭೂಮಿಯನ್ನು ರಕ್ತಮಯ ವನ್ನು ಮಾಡಬಹುದಿತ್ತು. ಆತನೆ ಹೇಳಿಲ್ಲವೆ 'ನನ್ನ ರಥದ ಚಕ್ರ ರಕ್ತದಲ್ಲಿ ಹೊರಳಾಡದಿರಲಿ' ಎಂದು.

ಚರಿತ್ರಕಾರ ಹೆಚ್.ಜಿ. ವೆಲ್ಸರು ಹೇಳುವಂತೆ "ಜಯದ ಮಧ್ಯದಲ್ಲಿ ಯುದ್ಧವನ್ನು ತ್ಯಜಿಸಿದವರಲ್ಲಿ ಅಶೋಕನೇ ಮೊದಲಿಗನು. ಅಶೋಕನು ತಮಿಳು ನಾಡಿನ ಪೂರ್ವ ಕರಾವಳಿಗೆ ಸಮೀಪವಾದ ಕಳಿಂಗದ ಮೇಲೆ ಧಾಳಿಯಿಟ್ಟನು. ಆತನ ಉದ್ದೇಶ ಪರ್ಯಾಯ ದ್ವಿಪವನ್ನೆಲ್ಲಾ ಸಂಪೂರ್ಣವಾಗಿ ತನ್ನ ರಾಜ್ಯಕ್ಕೆ ಸೇರಿಸ ಬೇಕೆಂಬುದು. ಆದರೆ ಯುದ್ಧದಲ್ಲಿ ಗೆದ್ದು, ಅಲ್ಲಿನ ಸಾವುನೋವುಗಳನ್ನು, ಭಯಂಕರತೆಯನ್ನು ಕಣ್ಣಾರ ಕಂಡು ಅಸಹ್ಯ ಪಟ್ಟನು"

ಮತ್ತೊಬ್ಬ ಇತಿಹಾಸಕಾರ ರಾಯಲ್ಸನ್ ಹೇಳುವಂತೆ "ಅಶೋಕನು ಬೌದ್ಧಮತಾವಲಂಬಿಯಾಗಿ ಮೊದಲು ಮಾಡಿದ ಕೆಲಸ, ತನ್ನ ನೆರೆಯವರನ್ನು ಬೌದ್ಧಮತದ ಅನುಯಾಯಿಗಳನ್ನಾಗಿ ಮಾಡಲು ಧರ್ಮಬೋಧಕರನ್ನು ಕಳುಹಿಸಿ ಗ್ರೀಕ್ ದೊರೆ ಆಂಟಿಯೋಕ್, ಈಜಿಪ್ಟಿನ ಟಾಲೆಮಿ, ಮ್ಯಾಸಿಡೋನಿಯಾದ ಆಂಟಿಗೊನ್, ಮತ್ತು ಸೈರನ್ನಿನ ಮ್ಯಾ ಫಾಸ್ ಮೊಲಾದವರನ್ನು ಬೌದ್ಧ ಮತಾನುಯಾಯಿಗಳನ್ನಾಗಿ ಮಾಡಿದನು. ಅಶೋಕನ ಉದ್ದೇಶ ಕೇವಲ ಮತ ಪ್ರಚಾರವಾಗಿರದೆ ಶಾಶ್ವತ ಶಾಂತಿಸ್ಥಾಪನೆಯಾಗಿದ್ದು, ಪದೇಪದೇ ಯುದ್ಧಗಳು ಸಂಭವಿಸಬಾರದೆ ಎಂಬುದಾಗಿದ್ದಿತು.

ಮ್ಯಾಸಿಡೋನಿಯಾದ ಅಲೆಗ್ಸಾಂಡರನಿಗೆ ಈತನನ್ನು ಹೋಲಿಸಿದರೆ, ಪ್ರಪಂಚವನ್ನೇ ಗೆಲ್ಲ ಬೇಕೆಂಬ ಹೆಬ್ಬಯಕೆ ಅಲೆಗ್ಸಾಂಡರನದಾಗಿದ್ದಿತು ಅಶೋಕನಾದರೆ ತಥಾಗತನ ಶುಭಸಂದೇಶಕ್ಕೆ ತಲೆ ಬಾಗಿದನು. ಆ ಸಂದೇಶವಾದರೂ

> ಸಾವಿರಾರು ಜನರನ್ನು ಯುದ್ಧದಲ್ಲಿ ಗೆದ್ದ ಮಾತ್ರಕ್ಕೆ ಶೂರನಾಗಲಿಲ್ಲ. ತನ್ನನ್ನು ತಾನು ಗೆದ್ದವನು ಮಾತ್ರ ಶೂರನಾಗುತ್ತಾನೆ. ಕೊಲ್ಲುವುದು ಅಪಮಾನ. ದ್ವೇಷಕ್ಕೆ ಪ್ರತೀಕಾರ ಮಾಡುವುದು ಮತ್ತೂ ಅಪಮಾನ. ಪ್ರಪಂಚದಲ್ಲಿ ದ್ವೇಷದಿಂದ ದ್ವೇಷ ಪರಿಹಾರವಾಗುವುದಿಲ್ಲ, ಪ್ರೇಮದಿಂದ ಮಾತ್ರ ದ್ವೇಷವನ್ನು ಗೆಲ್ಲಬಹುದು,

ಇದೇ ಶಾಶ್ವತ ಧರ್ಮ. ತಾಯಿ ತನ್ನ ಜೀವವನ್ನೇ ಒತ್ತೆಯಿಟ್ಟು ತನ್ನ ಮಗುವನ್ನು ರಕ್ಷಿಸುವಂತೆ "ಸರ್ವ ಜೀವಿಗಳನ್ನು ಕ್ಷೇಮದಿಂದ ರಕ್ಷಿಸಬೇಕು" ಇದು ಎಂತಹ ದಿವ್ಯ ಭವ್ಯ ಸಂದೇಶ! ಇದರಂತೆ ಅಶೋಕನು ತನ್ನನ್ನು ತಾನು ಗೆಲ್ಲಬೇಕಾಗಿದ್ದಿತು. ಪ್ರಪಂಚವನ್ನೇ ಸಂತೈಸಬೇಕಾಗಿದ್ದಿತು. ಆದ್ದರಿಂದ ಅಹರ್ನಿಶಿ ಧರ್ಮ ಸಂದೇಶಕ್ಕೆ ತನ್ನನ್ನೂ ತಾನು ಅರ್ಪಿಸಿಕೊಂಡು ಅದರಂತೆ ನಡೆದನು. ಡಾ||ಭಂಡಾರ್ಕರ್‌ರವರ ಅಭಿಮತದಂತೆ ಆತನು ಕಂಡ ಸತ್ಯ ಆಳವಾದದ್ದು. ಭ್ರಾತೃತ್ವ ಕೇವಲ ಮಾನವರದಲ್ಲ, ಸರ್ವ ಜೀವಿಗಳದ್ದು (It was the brotherhood

not simply, of human beings) ಎಂಬುದು ಅಶೋಕನು ಕಂಡ ಕನಸು ಇಡೀ ಪ್ರಪಂಚದ ಭೌತಿಕ ಮತ್ತು ನೈತಿಕ ಧರ್ಮದ ಉದ್ಧಾರ.

ಶತಶತಮಾನಗಳುರುಳಿದರೂ ಅಶೋಕನ ಶಾಸನಗಳು ಆತನು ಕಂಡ ಸತ್ಯವನ್ನು ನಿತ್ಯನೂತನವಾಗಿ ಇಂದಿಗೂ ಧ್ವನಿಸುತ್ತಿವೆ. ಇವು ಸತ್ವಯುತವಾದ ಬೌದ್ಧ ಧರ್ಮದ ಸಂದೇಶಗಳೆಂದು ಟಾಗೂರರು ಹೇಳುತ್ತಾರೆ. ಕರುಣೆಯೇ ಇವುಗಳ ಕೀಲಿ. ಆ ಮೂಲಕ ಅವುಗಳ ವಿವರಣೆಯನ್ನು ಪಡೆಯಬೇಕೆಂದು, ಕನಿಂಗ್‌ಹಾಮರು ಹೇಳುತ್ತಾರೆ.

ಅಶೋಕಶಾಸನದ ಧರ್ಮ ಬೋಧೆಯಾದರೂ ಏನು ? "ಎಲ್ಲರು ನನ್ನ ಮಕ್ಕಳೇ" ನನ್ನ ಮಕ್ಕಳಿಗೆ ನಾನು ಒಳ್ಳೆಯದನ್ನು ಬಯಸುವಂತೆ,

ಎಲ್ಲರೂ ವರ್ತಮಾನ ಭವಿಷ್ಯತ್ ಜೀವನದಲ್ಲಿ ಅಭ್ಯುದಯ ಹಾಗೂ ಆನಂದವನ್ನು ಪಡೆಯಲಿ, ಇದೇ ನನ್ನ ಅಪೇಕ್ಷೆ" ಶಾಸನ ಮುಂದುವರಿದು ‹‹ಪ್ರಪಂಚವು ನನ್ನಿಂದ ಸುಖವಾಗಿರಲಿ, ಸುಖವನ್ನು ಪಡೆಯಲಿ, ದುಃಖದಿಂದ ದೂರವಿರಲಿ, ಜೀವಿಗಳ ಕೆಂದು, ಜೀವಿಗಳು ಬದುಕದಿರಲಿ. ಎಲ್ಲರಿಗೂ ಒಳ್ಳೆಯದನ್ನು ಮಾಡುವುದಕ್ಕಿಂತ ಉನ್ನತವಾದ ಸಂತೋಷ ಯಾವುದೂ ಇಲ್ಲ. ಪ್ರಪಂಚದ ಅಭ್ಯುದಯಕ್ಕೆ ನಾನು ದುಡಿಯುವಂತಾಗಲಿ." ಪ್ರಪಂಚದ ಇತಿಹಾಸದ ಯಾವ ಪುಟವನ್ನೇ ತಿರುವಿ ಹಾಕಿದರೂ ಇಂತಹ ದಯಾಳುವಾದ ನಿಸ್ಪೃಹನಾದ ಚಕ್ರವರ್ತಿ ಅಶೋಕನಲ್ಲದೆ ಮತ್ತಾರು ಕಾಣಿಸಿಯಾರು ? ಅಶೋಕನ ಜೀವನ ಸರ್ವಪ್ರಾಣಿಗಳಿಗೂ ಆನಂದದಾಯಕವಾದದ್ದು.

ಆಂಗ್ಲ ಇತಿಹಾಸಕಾರ ಸ್ಮಿತ್‌ರವರು ಹೇಳುವಂತೆ "ಪ್ರಪಂಚ ಆತನು ನೀಡಿದ ಫಲವನ್ನು ಇನ್ನೂ ಅನುಭವಿಸುತ್ತದೆ."

"ನಾನು ಬಯಸುವ ಬಹುಮಾನವೆಂದರೆ, ಪವಿತ್ರಾತ್ಮನಾದ ಬುದ್ಧ ಹೇಳಿದಂತೆ ತನ್ನನ್ನು ತಾನು ಗೆಲ್ಲುವುದು." ಎಂಬುದು ಧರ್ಮದ ಪ್ರತಿರೂಪನಾದ ಅಶೋಕನ ವಾಣಿ.

ಅಶೋಕಚಕ್ರವರ್ತಿಯಲ್ಲಿ ಉದಾತ್ತವಾದ ದೊಡ್ಡತನಗಳು ಜೊತೆಗೂಡಿದ್ದವು. ಆದ್ದರಿಂದಲೇ ಚರಿತ್ರೆಯಲ್ಲಿ ಅಶೋಕನನ್ನು ಗೌರವಿಸಿದ ಹಾಗೆ ಮತ್ತಾರನ್ನೂ ಗೌರವಿಸುವುದಿಲ್ಲ. ಅಶೋಕನು ಕೈಗೊಂಡ ಹಲವು ಕ್ರಮಗಳಿಂದ, ಬಹು ಮಂದಿಯ ಭೌತಿಕ ಜೀವನವನ್ನು ಆನಂದಗೊಳಿಸಿದ್ದಲ್ಲದೆ, ಉಪಯುಕ್ತ ಜೀವನವನ್ನು ನಡೆಸುತ್ತಾ ಉನ್ನತ ಭಾವನೆಗಳಿಂದಿರುವ ಹಾಗೆ ಮಾಡಿದನು. ಆತನು ನಮ್ಮ ಸಮಕಾಲಿನನಲ್ಲದಿದ್ದರೂ, ನಮ್ಮ ಜೀವನವನ್ನೂ ಸಂಪದ್ಯುಕ್ತವನ್ನಾಗಿ ಮಾಡಿದ್ದಾನೆ.

ಆತನು ನಡೆಸಿದ ಪ್ರಾಮಾಣಿಕ ಜೀವನದ ದಿವ್ಯ ಸಂದೇಶ ನಮಗಿನ್ನೂ ಕೇಳಿಸುತ್ತಿದೆ. ಆತನು ಬಿಟ್ಟು ಹೋಗಿರುವ ಆಸ್ತಿಗೆ ಭಾರತೀಯರಾದ ನಾವು ಹೆಮ್ಮೆ ಪಡಬೇಕಾಗಿದೆ. ಉನ್ನತವಾದ ಆಧ್ಯಾತ್ಮಿಕ ಮತ್ತು ನೈತಿಕ ಜೀವನವನ್ನು ರೂಪಿಸಿಕೊಳ್ಳಲು, ಆಸೆ ಆಕಾಂಕ್ಷೆಗಳಿಂದ ಕೂಡಿದ, ಇಂದಿನ ತರುಣ ಭಾರತೀಯರಿಗೆ ಅವನ ಸಂದೇಶಗಳು ಸ್ಫೂರ್ತಿಯನ್ನು ನೀಡುತ್ತವೆ.

ಚಾರ್ಲ್‌ಮೇನ್, ಮತ್ತು ಸೀಸರ್ ಇವರುಗಳಿಗಿಂತಲೂ, ಅಶೋಕನೇ ಹಿರಿದು ಎನ್ನುತ್ತಾರೆ ಕೋಪನ್ ಎನ್ನುವವರು. ಆದುದರಿಂದಲೇ ಎಲ್ಲಾ ಶಿಲಾಶಾಸನಗಳಿಗಿಂತಲೂ ಅಶೋಕನ ಶಿಲಾಶಾಸನಗಳನ್ನು ವಿದ್ವಾಂಸರು ಪ್ರೀತಿಯಿಂದ, ಹಲವಾರು ಬಾರಿ ಪರಿಶೋಧಿಸಿ, ಪ್ರಕಟಿಸಿ, ಪ್ರಚಾರಮಾಡಿರುವುದು. ಅಶೋಕ ಚಕ್ರವರ್ತಿ ಮಾನವೀಯ ಗುಣಗಳಿಂದಕೂಡಿದ ಚರಿತ್ರಾರ್ಹನಾದ ಚಕ್ರವರ್ತಿ.

ಜಯದ ಮಧ್ಯದಲ್ಲಿ ಯುದ್ಧವನ್ನು ತ್ಯಜಿಸಿ ಕತ್ತಿಯ ಮೊನೆಯಿಂದ ಕಟ್ಟಿದ ಸಾಮ್ರಾಜ್ಯ ಶಾಶ್ವತವಲ್ಲವೆಂದು ಭಾವಿಸಿ ತತ್ವಸಾಮ್ರಾಜ್ಯವನ್ನು ಮಾನವ ಹೃದಯದಲ್ಲಿ ಬಿತ್ತಿ ಬೆಳಸಿ, ಇಂದಿಗೂ ಎಂದೆಂದಿಗೂ, ಜನಮನದ ಹೃದಯ ಸಿಂಹಾಸನದಲ್ಲಿ ಶಾಶ್ವತವಾಗಿ ನೆಲೆಸಿದ್ದಾನೆ.

(20ನೇ ಪುಟ ನೋಡಿ)

# ಮಾಘನ ಗರ್ವಭಂಗ

—ಪ. ರಾಮಕೃಷ್ಣ ಶಾಸ್ತ್ರಿ.

ಭೋಜರಾಜನ ಆಸ್ಥಾನದ ನವರತ್ನಗಳಲ್ಲೊಬ್ಬನಾದ ಕವಿ ಮಾಘ ಪಂಡಿತ ಶಿಖಾಮಣಿಯೂ ಆಗಿದ್ದ. ಆದರೆ ಅವನಿಗೆ ತಾನು ವಿದ್ವಾಂಸನೆಂಬ ಅಹಂಕಾರ ನೆತ್ತಿಗೇರಿತ್ತು. ಜ್ಞಾನ ತನಗೊಬ್ಬನಿಗೇ ಇರುವ ಗುತ್ತಿಗೆ ಎಂಬ ಗರ್ವವನ್ನು ಆತ ಎಲ್ಲರಲ್ಲಿಯೂ ತೋರ್ಪಡಿಸುತ್ತಿದ್ದ.

ಒಂದು ದಿನ ಮಾಘನೊಂದಿಗೆ ಭೋಜರಾಜ ಸಂಜೆಯ ಗಾಳಿ ಸವಾರಿಗೆ ಹೊರಟ. ಇಬ್ಬರೂ ಸಾಹಿತ್ಯಾರಾಧನೆಯ ಸರಸ ಸಲ್ಲಾಪಗಳನ್ನು ಆಡುತ್ತಾ ನಡೆಯುತ್ತಿದ್ದಂತೆ ಉಜ್ಜಯಿನಿಯಿಂದ ತಾವು ಬಹು ದೂರಕ್ಕೆ ಬಂದಿರುವುದನ್ನು ತಾವು ಗಮನಿಸಿಯೇ ಇರಲಿಲ್ಲ. ಸಂಚಾರ ಮುಗಿದು, ಅರಮನೆಗೆ ಹಿಂತಿರುಗುವಾಗ ಕತ್ತಲಾಗಿತ್ತು. ಅವರಿಗೆ ದಾರಿ ತಿಳಿಯದಾಗಿತ್ತು. ದಾರಿ ಸಿಕ್ಕದೆ ಅಲೆದಾಡುತ್ತಾ ಅವರು ಒಂದು ಗುಡಿಸಲಿಗೆ ಬಂದರು. ಅಲ್ಲಿ ಮುದುಕಿಯೊಬ್ಬಳು ಕುಳಿತ್ತಿದ್ದಳು. ಮಾಘ ಅವಳೊಂದಿಗೆ "ಲೇ ಮುದುಕಿ ಈ ದಾರಿ ಎಲ್ಲಿಗೆ ಹೋಗುತ್ತದೆ ?" ಎಂದು ಕೇಳಿದನು.

ಮುದುಕಿ ಆಗುಂತಕರಿಬ್ಬರನ್ನು ಅಪಾದಮಸ್ತಕ ವೀಕ್ಷಿಸಿದಳು, ಫಕ್ಕನೆ ನಕ್ಕಳು. 'ಎಲಾ ದಾರಿ ಎಲ್ಲಿಗೆ ಹೋಗುತ್ತೆ, ಅದು ಅಲ್ಲಿಯೇ ಬಿದ್ದುಕೊಂಡಿದೆ ನೋಡಿ. ಅದಿರಲಿ, ಇಂತ ತಮಾಷೆಯ ಪ್ರಶ್ನೆ ಕೇಳಿದ ನೀವು ಯಾರು ? ಎಂದಳು.

ನಾವು ಯಾತ್ರಿಕರು ಎಂದ ಮಾಘ.

ಯಾತ್ರಿಕರೇ ? ಮುದುಕಿ ಮುಗುಳುನಗುತ್ತಾ, ನೀವು ಯಾತ್ರಿಕರು ಹೇಗಾಗಲು ಸಾಧ್ಯ? ಯಾತ್ರಿಕರು ಇಬ್ಬರು ಮಾತ್ರ ಒಬ್ಬ ಸೂರ್ಯ ಇನ್ನೊಬ್ಬ ಚಂದ್ರ ಮಾತ್ರ. ನೀವು ಯಾರು ಹೇಳಿ ಎಂದು ಹೇಳಿದಳು.

ಮಾಘ ತರ್ಕಬದ್ಧವಾಗಿ ನುಡಿದ. ನಾವು ಕ್ಷಣಿಕ ಮನುಷ್ಯರು.

ಕ್ಷಣಿಕ ವಸ್ತುಗಳು ಜಗತ್ತಿನಲ್ಲಿ ಒಂದು ಯೌವನ ಇನ್ನೊಂದು ಸಂಪತ್ತು– ಇವೆರಡು ಮಾತ್ರ ಇವೆ. ಕ್ಷಣಿಕ ಮನುಷ್ಯರು ಎಂಬುದೇ ಇಲ್ಲ. ನೀ-ವಾರೋ ಹೇಳಿರಲ್ಲ" ಎಂದಳಾ ಮುದುಕಿ.

ಮುದುಕಿಯೊಂದಿಗೆ ತನ್ನ ಪರಾಜಯವನ್ನು ಒಪ್ಪಿಕೊಳ್ಳಲು ಮಾಘ ಸಿದ್ಧನಿರಲಿಲ್ಲ. "ನಾವು ರಾಜರು".

" ನೀವು ರಾಜರು ಖಂಡಿತ ಅಲ್ಲ. ರಾಜರು ಇಬ್ಬರು ಮಾತ್ರ ಇದ್ದಾರೆ. ಒಬ್ಬ ಯಮರಾಜ ಮತ್ತೊಬ್ಬ ದೇವೇಂದ್ರ. ನೀವು ಯಾರು ಹೇಳಿ" ಎಂದು ಕೇಳಿದಳು ಮುದುಕಿ.

ಮುದುಕಿಯ ಅಸಾಮಾನ್ಯ ಜ್ಞಾನದೆದುರು ತಾನು ಹೆಜ್ಜೆ ತಪ್ಪುತ್ತಿರುವಂತೆನಿಸಿದರೂ ಮಾಘ ಸಾವರಿಸಿಕೊಂಡು, "ನಾವು ಕ್ಷಮಾವುದಾತರು"ಎಂದ.

"ನೀವು ಕ್ಷಮಾಪುದಾತರೆ? ಅದು ಅಸಂಭವ. ಕ್ಷಮಾಪುದಾತರು ಇಬ್ಬರೇ ಇಬ್ಬರು ಪೃಥ್ವಿ ಮತ್ತು ವನಿತೆ. ಇವರ ಪೈಕಿ ನೀವಿಬ್ಬರೂ ಅಲ್ಲವಷ್ಟೇ?'' ಎಂದು ಮುದುಕಿ ಪ್ರಶ್ನಿಸಿದಳು.

ಕ್ಷಣಕ್ಷಣಕ್ಕೂ ತನ್ನ ಸೋಲು ನಿಶ್ಚಿತವಾಗುತ್ತಿರುವುದನ್ನು ನೋಡಿ ಮಾಘ ಕಂಗಾಲಾದ. ಆದರೂ ಪಾಂಡಿತ್ಯದ ಗರ್ವದಿಂದ ಸುಲಭದಲ್ಲಿ ಸುಮ್ಮನಾಗದೆ ನುಡಿದ– ''ನಾವು ಪರದೇಶಿಗಳು"

''ಎಂದಿಗೂ ಸಾಧ್ಯವಿಲ್ಲ'' ಮುದುಕಿ ಸ್ಪಷ್ಟಪಡಿಸಿದಳು. ''ಜಗತ್ತಿನಲ್ಲಿ ಜೀವನ ಮತ್ತು ಮರದ ಎಲೆಗಳ ಹೊರಿತು ಬೇರೆ ಯಾರು ಪರದೇಶಿಗಳಿದ್ದಾರೆ?"

ಮಾಘನ ಬಾಯಿ ಕಟ್ಟಿ ಹೋಯಿತು.

(24 ನೇ ಪುಟನೋಡಿ)

# ವೇದಾಂತವೂ - ಸಾಹಿತ್ಯವೂ

— ಜಗ್ಗು ಆಳ್ವಾರೈಯ್ಯಂಗಾರ್.

ಉಪನಿಷತ್ತು, ಗೀತೆ, ವ್ಯಾಸಸೂತ್ರ, ಇವು ಚಿನ್ನದ ಘಟ್ಟಿಯಂತೆ, ಚತುರನಾದ ಅಕ್ಕಸಾಲಿಗನು ಚಿನ್ನದ ಘಟ್ಟಿಯನ್ನು ತನ್ನ ಆಶಯದಂತೆ ಕುಶಲತೆಯಿಂದ ಚಿತ್ರಿಸಿ ವಿಚಿತ್ರವಾದ ಆಭರಣಗಳನ್ನಾಗಿಸಿ ಜನಗಳ ಶರೀರವನ್ನು ಯಾವ ರೀತಿ ಅಲಂಕರಿಸುವನೋ ಅದೇ ರೀತಿ ನಮ್ಮ ಆಚಾರ್ಯರೂ ಕೂಡ ಮೇಲೆ ಹೇಳಿದ ಉಪನಿಷತ್ತು, ಗೀತೆ, ವ್ಯಾಸ ಸೂತ್ರ, ಇವುಗಳನ್ನೇ ಆಧಾರವಾಗಿಟ್ಟುಕೊಂಡು ತಮ್ಮ ತಮ್ಮ ಆಶಯಕ್ಕನುಗುಣವಾಗಿ ಬೇರೆ ಬೇರೆ ಮತ ರೂಪವಾದ ಆಭರಣಗಳಿಂದ ಜನಗಳ ಆತ್ಮಗಳನ್ನು ಅಲಂಕರಿಸಿರುವರು, ಜನಗಳೂ ಕೂಡ ತಮಗೆ ಇಷ್ಟವಾದ ಆಭರಣವನ್ನು ತೊಡಿಸಿಕೊಳ್ಳುವಂತೆ, ಅವರವರಿಗೆ ಇಷ್ಟವಾದ ಮತವನ್ನು ಅವಲಂಬಿಸಿ, ಆತ್ಮವನ್ನು ಅಲಂಕರಿಸಿಕೊಂಡಿರುವರು. ಆಚಾರ್ಯರುಗಳಲ್ಲಿ ಕೆಲವರು ಬ್ರಹ್ಮ ಒಂದೇ ಸತ್ಯ ಉಳಿದವು ಮಿಥ್ಯೆಯೆಂದೂ, ಮತ್ತೆ ಕೆಲವರು, ಎಲ್ಲಿವೂ ಸತ್ಯ, ಶರೀರ ಶರೀರಿ ಭಾವವೆಂದೂ, ಮತ್ತೆ ಕೆಲವರು ರಾಜಭೃತ್ಯ ಭಾವವೆಂದೂ ಮತ್ತೆ ಕೆಲವರು ಈಶ್ವರನೇ ಇಲ್ಲವೆಂದೂ, ಮತ್ತೆ ಕೆಲವರು ಪುರುಷ ವಿಶೇಷ ಈಶ್ವರನೆಂದೂ ಹೇಳಿರುವರು. ಇದೇ ರೀತಿ ಅನೇಕ ಮತಗಳು. ಜಗತ್ತಿನಲ್ಲಿ ಹರಡಿವೆ, ಆದರೆ, ಎಲ್ಲರಿಗೂ ಮೋಕ್ಷ ಒಂದೇ ಗುರಿ. ಈ ಸಂಸಾರ ಚಕ್ರದಿಂದ ಬಿಡುಗಡೆ ಹೊಂದುವುದೊಂದೇ ಧ್ಯೇಯ' ಆದರೆ ತಮ್ಮ ತಮ್ಮ ಮತವನ್ನು ಸಾಧಿಸಿಕೊಳ್ಳಲು ಜಟಿಲವಾದ ತರ್ಕ ವಿತರ್ಕಗಳನ್ನು ಹರಡಿರುವರು, ಇದರಿಂದ ಜನಗಳಿಗೆ ಮನಶ್ಚಾಂಚಲ್ಯವುಂಟಾಗಬಹುದು, ಆದ್ದರಿಂದಲೇ, 'ಶಾಸ್ತ್ರಜ್ಞಾನಂಬಹುಕ್ಲೇಶಂಬುದ್ಧೇಶ್ಚಲನಕಾರಣಂ! ಉಪದೇಶಾದ್ಧರಿಂಬುಧ್ವಾ ವಿರಮೇತ್ಸರ್ವಕರ್ಮಸು, ಎಂದು ಹೇಳಿರುವುದು. ಅದೂ ಅಲ್ಲದೆ ಪರಬ್ರಹ್ಮಕ್ಕೆ, ಗುಣವಿಲ್ಲ, ರೂಪವಿಲ್ಲ, ಆಕಾರವಿಲ್ಲ, ಆಕಾಶದಂತೆ ಸರ್ವವ್ಯಾಪಕತೆಯುಂಟು, ಎಂದು ಅನೇಕ ಆಚಾರ್ಯರುಗಳ ಮತವು, ಅವರೆಲ್ಲರೂ ನಿರ್ಗುಣಶ್ರುತಿಯೊಂದನ್ನೇ ಅವಲಂಬಿಸಿರುವರು, ವಿಶಿಷ್ಟಾದ್ವೈತ ಮತಾವಲಂಬೀಆಚಾರ್ಯರೊ ಅಂದರೆ, ನಿರ್ಗುಣಶ್ರುತಿ, ಸಗುಣ,ಶ್ರುತಿ, ಎಲ್ಲವೂ ಗ್ರಾಹ್ಯವೇ ಶ್ರುತಿಯು ಯಾವಾಗಲೂ ಪರಸ್ಪರ ವಿರುದ್ಧಾರ್ಥಹೇಳುವುದಿಲ್ಲ, ಆದ ಕಾರಣ ಘಟಕ ಶ್ರುತಿಯಿಂದ ಅವೆರಡಕ್ಕೂ ಸಾಮಂಜಸ್ಯವನ್ನುಂಟುಮಾಡಿ ಅರ್ಥಮಾಡುವುದು ನಮ್ಮ ಕರ್ತವ್ಯವೆಂದು ಭಾವಿಸಿ, ನಿರ್ಗುಣವೆಂದರೆ ಹೇಯಗುಣರಹಿತ, ಸಗುಣವೆಂದರೆ ಕಲ್ಯಾಣಗುಣಪರಿಪೂರ್ಣ, ಎಂದು ಹೇಳಿರುವರು, ಈ ಚರ್ಚೆಯ ವಿಚಾರವಿರಲಿ, ಕಾಂತಾಸಂಮಿತವಾದ ಕಾವ್ಯಪಂಥವನ್ನು ಅವಲಂಬಿಸಿ ಭಗವಂತನನ್ನು ಅನುಭವಿಸಬೇಕೆಂಬ ಆಶಾವಿಶೇಷವು, ಸಮಸಾಚಾರ್ಯರುಗಳಲ್ಲಿಯೂ ಮೂಡಿತ್ತು ಎಂಬುವುದಕಲ್ಲಿ, ಯಾವಸಂದೇಹವೂ ಇಲ್ಲ, ಆದರೆ ರೂಪವಿಲ್ಲದ, ಆಕಾರವಿಲ್ಲದ, ಗುಣವಿಲ್ಲದ, ಭಗವಂತನನ್ನು ಯಾವರೀತಿ, ಅನುಭವಿಸಲು ಸಾಧ್ಯ, ಆದ ಕಾರಣ ಭಗವಂತನಲ್ಲಿ, ಆಕಾರವನ್ನೂ, ಸುಂದರ ರೂಪವನ್ನೂ, ಸದ್ಗುಣಗಳನ್ನೂ, ಅಂಗೀಕರಿಸಲೇಬೇಕು, ರೂಪವಿಲ್ಲ, ಗುಣವಿಲ್ಲ, ಎಂದು ಸಮರ್ಥಿಸುವ

ಭಗವಚ್ಛಂಕರಾಚಾರ್ಯರೂ ಕೂಡ, ಭಗವಂತನ ಗುಣಗಳನ್ನು ಹೊಗಳಿ ವಿಷ್ಣು ವಿಂದಾದಿ ಕೇಶಾಂತ ಸ್ತೋತ್ರವನ್ನೂ, ಲಕ್ಷ್ಮೀನರಸಿಂಹಕರಾವಲಂಬ ಸೂತ್ರವನ್ನೂ, ಭಜಗೋವಿಂದ ಸೂತ್ರವನ್ನೂ, ಇದೇ ರೀತಿ ಶಂಕರನವಿಷಯಕವಾದ ಅನೇಕ ಸ್ತೋತ್ರಗಳನ್ನೂ, ರಚಿಸಿ ಭಗವಂತನನ್ನು ಅನುಭವಿಸಿರುವರು. ತರ್ಕ ವಿತರ್ಕಕ್ಕೆ ಯೆಡೆಗೊಡದೆ, ಎಲ್ಲಾ ಮತದ ಆಚಾರ್ಯರುಗಳೂ ಕೂಡ ಸ್ತೋತ್ರ ರೂಪದಲ್ಲಿ ಭಗವಂತನನ್ನು ಅನುಭವಿಸಿರುವರು, ಈಗಲೂ ಕೂಡ ಅನೇಕ ಭಕ್ತರು ಮನಶ್ಚಾಂಚಲ್ಯವನ್ನು ದೂರ ಮಾಡಿ, ಆ ಆಚಾರ್ಯರುಗಳ ಸ್ತೋತ್ರಗಳನ್ನೇ ಪಠಿಸಿ ಆನಂದಿಸುತ್ತಿರುವರು, ಹಿಂದಿನ ಆಚಾರ್ಯರು ಕೆಲವರು, ಉನ್ಮತ್ತಕವಾದ ಭಕ್ತ್ಯತಿಶಯದಿಂದ ತನ್ನನ್ನು ನಾಯಕೆಯನ್ನಾಗಿಯೂ, ಭಾವಿಸಿ, ಅವನ ಸರ್ವಾವಯವ ಸೌಂದರ್ಯ ಸದ್ಗುಣಗಳನ್ನು ಹೊಗಳಿ, ನಿನ್ನನ್ನು ನಾನು ಯಾವಾಗ ಸೇರುವನೋ, ಎಂದು ಪದ್ಯಗಳನ್ನು ರಚಿಸಿರುವರು, ಆ ಪದ್ಯಗಳಲ್ಲಿ, ವಿಪ್ರವಲಂಭಶೃಂಗಾರ, ಸಂಯೋಗ ಶೃಂಗಾರ, ದೂತಪ್ರೇಷಣ, ಇವೆಲ್ಲವೂ ತುಂಬಿ ತುಳುಕುತ್ತಲಿವೆ, ಅಂತೂ, ಕಾಂತಾಸಮ್ಮಿತವಾದ ಕಾವ್ಯರೂಪದಿಂದ, ವೇದಾಂತಾರ್ಥಗಳನ್ನು ಹೇಳಿದರೇನೇ, ಜನಸಾಮಾನ್ಯರ ಮನಸ್ಸಿನಲ್ಲಿ ಭಕ್ತಿಯು ಬೇರೂರುವುದೇ ಹೊರತು, ಕೇವಲ ತರ್ಕ-ವಿತರ್ಕಗಳಿಂದ ಜಟಿಲವಾದ ವೇದಾಂತವಾದ ವಿವಾದಗಳಿಂದ ಜನಗಳ ಹೃದಯದಲ್ಲಿ ಭಕ್ತಿಯು, ತಲೆದೋರದು, ಅದೂ ಅಲ್ಲದೆ ಭಕ್ತರುಗಳು ಭಜನೆ ಮಾಡಬೇಕಾದರೆ, ಛಂದೋಬದ್ಧವಾದರೇನೇ ತಾಳಕ್ಕನುಗುಣವಾಗಿ ಭಜನೆ ಮಾಡಬಹುದು, ಆದ್ದರಿಂದಲೇ "ಸಂಗೀತಮಪಿ ಸಾಹಿತ್ಯಂ ಸರಸ್ವತ್ಯಾಸ್ಸ್ತನದ್ವಯಂ" ಎಂದಿರುವುದು,

ಮುಖ್ಯ ಸಾರಾಂಶವಿದು, ಭಗವಂತನನ್ನು ಅರಿಯಲು ವೇದಾಂತಬೇಕು. ಆದ್ದರಿಂದ ಈ ಸಂಸಾರದಲ್ಲಿ ಜಿಹಾಸೆಯೂ, ಭಗವಂತನಲ್ಲಿ ಆಭಿಮುಖ್ಯವೂ ಉಂಟಾಗುವುದು, ಆದರೆ ಆ ವೇದಾಂತವು, ತರ್ಕ, ಪೂರ್ವಪಕ್ಷ, ಸಿದ್ಧಾಂತ, ಇವುಗಳಿಂದ ಜಟಿಲವಾಗಿ ದುರವಗಾಹವಾಗಿರುವುದು, ಸಾಹಿತ್ಯವೋ ಎಂದರೆ ಮೊಸರಿನಿಂದಕಡೆದೆತ್ತಿದ ಬೆಣ್ಣೆಯಂತೆ, ಸರ್ವಜನ ಹೃದಯಂಗಮವಾಗದಿರುವುದು, ಆದ್ದರಿಂದಲೇ, ಭಕ್ತಾದಿಗಳೆಲ್ಲರೂ. ನಾನಾ ಭಾಷೆಗಳಲ್ಲಿ ಛಂದೋಬದ್ಧವಾಗಿ ವೇದಾಂತದ ಸಾರಾಂಶವನ್ನು ಹಾಡಿ ಜನಗಳ ಮನಸ್ಸನ್ನು ಆಕರ್ಷಿಸಿರುವರು. ಆದ್ದರಿಂದ ವೇದಾಂತವು ಸಾಹಿತ್ಯ ರೂಪದಲ್ಲಿ ಪರಿಣಮಿಸಿದರೇನೇ ಲೋಕೋಪಕಾರವಾಗುವುದರಲ್ಲಿ ಸಂದೇಹವಿಲ್ಲ. —

---

(17ನೇ ಪುಟದಿಂದ)

## ಅಶೋಕನ ಧರ್ಮಚಕ್ರ ಸಂದೇಶ

ಎದೆ.ದರಿಂದಲೇ ಭಾರತೀಯನಲ್ಲದ ಇಂಗ್ಲೀಷ್ ಚರಿತ್ರಕಾರರೊಬ್ಬರು ತನ್ನ 'ಪ್ರಪಂಚದ ಇತಿಹಾಸದ ರೂಪರೇಖೆಗಳು' (Out line of the History) ಎಂಬ ಗ್ರಂಥದಲ್ಲಿ ಹೀಗೆ ನುಡಿದಿದ್ದಾರೆ. "ಈತನು ತನ್ನ ವಿಶಾಲವಾದ ಸಾಮ್ರಾಜ್ಯವನ್ನು ಶಾಂತಿಯಿಂದಲೂ, ಧಕ್ಷತೆಯಿಂದಲೂ ಆಳಿದನು. ಜೀವನದಲ್ಲಿ ನಡೆದ ಒಂದೇ ಒಂದು ಯುದ್ಧದಿಂದ ಬೇಸತ್ತು, ಬೌದ್ಧ ಧರ್ಮಾವಲಂಬಿಯಾದನು. ಅಷ್ಟ ಮಾರ್ಗವನ್ನನುಸರಿಸಿ ನಿರ್ವಾಣ ಪದವಿಯನ್ನು ಪಡೆದನು. ಭಾವಿಗಳನ್ನು ತೋಡಿಸಿಲು ವ್ಯವಸ್ಥೆ ಮಾಡಿದನು. ಧರ್ಮಕಾರ್ಯಗಳನ್ನು ನೋಡಿಕೊಳ್ಳಲು ಅಧಿಕಾರಿಗಳನ್ನು ನಿಯಮಿಸಿದನು. ಸಾರ್ವಜನಿಕ ಔಷಧಾಲಯಗಳನ್ನೂ, ತೋಟಗಳನ್ನೂ ಸ್ಥಾಪಿಸಿದನು. ಗಿಡಮೂಲಿಕೆಗಳನ್ನು ತೋಟಗಳಲ್ಲಿ ನೆಡಿಸಿದನು. ಗಿರಿಜನರ ಯೋಗಕ್ಷೇಮ ನೋಡಿಕೊಳ್ಳಲು ಒಬ್ಬ ಮಂತ್ರಿಯನ್ನೇ ನೇಮಿಸಿದ್ದನು. ಸ್ತ್ರೀ ವಿದ್ಯಾಭ್ಯಾಸಕ್ಕೆ ಅನುವು ಮಾಡಿದನು. ತನ್ನ ಪ್ರಜೆಗಳೆಲ್ಲರ ಜೀವನಕ್ಕೆ ಅನುಕೂಲವಾಗುವಂತೆ, ಮೊಟ್ಟಮೊದಲು ವಿದ್ಯಾಭ್ಯಾಸವನ್ನು ಜಾರಿಗೆ ತಂದ ದೊರೆ ಎಂದರೆ ಅಶೋಕನೇ! ದೇಶವಿದೇಶಗಳಿಗೆ ಧರ್ಮಪ್ರಚಾರಕ್ಕಾಗಿ ಬೌದ್ಧ ಭಿಕ್ಷುಗಳನ್ನು ಕಳುಹಿಸಿದನು." ಎಂದು ಉಲ್ಲೇಖಿಸಿದ್ದಾನೆ. ಆತನು ಮುಂದುವರೆದು "Amidst thousands and thousands

(24 ನೇ ಪುಟನೋಡಿ)

ಮುಂದುವರೆದ ಲೇಖನ

# ನಮ್ಮ ರೈತ ಅಂದು-ಇಂದು

—ಡಿ. ವೆಂಕಟರಾವ್.

## ಸಹಕಾರಿ ಸಾಗುವಳಿ ಸಂಸ್ಥೆಗಳು

ಇಂದಿನ ರೈತರಿಗೆ ವರಪ್ರದಾನವಾಗಿರುವ ಮತ್ತೊಂದು ವಿಶಿಷ್ಟ ಸಂಸ್ಥೆಯೆಂದರೆ ಸಹಕಾರಿ ಸಾಗುವಳಿ. ಕಡಿಮೆ ಭೂಮಿಯುಳ್ಳ ರೈತರ ಬದುಕಿನಲ್ಲಿ ಇದೊಂದು ಮೈಲಿಗಲ್ಲಾಗಿದೆ ಎನ್ನಬಹುದು. ಈ ಸಂಸ್ಥೆಯು ಸಾಮಾನ್ಯವಾಗಿ ಭೂಹೀನರ ಅಥವಾ ನಿರ್ಗತಿಕ ಚಿಕ್ಕ ಬೇಸಾಯಗಾರರ ಸಂಸ್ಥೆಯಾಗಿದೆ. ರೈತರ ಶಕ್ತಿ ಸಾಧನಗಳನ್ನು ಹೆಚ್ಚಿಸಿ ಅವರಿಗೆ ಸ್ವಾವಲಂಬನೆಯ ದಾರಿ ತೋರುವಲ್ಲಿ ಇಂದು ಈ ಸಂಸ್ಥೆಗಳು ಯಶಸ್ವಿಯಾಗುತ್ತಿವೆ.

**ಸಹಕಾರಿ ಮಾರಾಟ ಸಂಸ್ಥೆಗಳು:**—ಇಂದು ಈ ಸಂಸ್ಥೆಗಳು ರೈತರ ಉತ್ತಮ ಬದುಕಿಗೆ ದಾರಿ ತೋರುವ ದೀವಟಿಗೆಗಳಾಗಿವೆ. ಈ ಮಾರಾಟ ಸಂಸ್ಥೆಗಳ ಸೌಲಭ್ಯದಿಂದಾಗಿ ಇಂದಿನ ರೈತರು ತಕ್ಕಮಟ್ಟಿಗೆ ನೆಮ್ಮದಿಯ ಜೀವನವನ್ನು ನಡೆಸುವಂತಾಗಿದೆ. ಕೇವಲ ಕೃಷಿಯ ಉತ್ಪನ್ನ ಅಧಿಕಗೊಂಡಾಕ್ಷಣ ರೈತರ ಆರ್ಥಿಕ ಸ್ಥಿತಿಗತಿಗಳು ಸುಧಾರಿಸುವುದಿಲ್ಲ. ಅವರು ಬೆಳೆದ ಧಾನ್ಯಗಳಿಗೆ ಯೋಗ್ಯ ಬೆಲೆ ದೊರೆಯುವಂತಾದರೆ ಮಾತ್ರ ರೈತರ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆತು ಅವರ ನೆಮ್ಮದಿಯ ಬದುಕಿಗೆ ನಾಂದಿಯಾಗುತ್ತದೆ. ಇದರಿಂದಾಗಿ ಅವರು ಇನ್ನೂ ಹೆಚ್ಚು ಉತ್ಸಾಹಶಾಲಿಗಳಾಗಲು ಸಾಧ್ಯ. ಈ ದಿಸೆಯಲ್ಲಿ ರಾಷ್ಟ್ರದ ಪ್ರಗತಿಯ ಪ್ರತೀಕವಾಗಿರುವ ರೈತರ ಅಭ್ಯುದಯಕ್ಕಾಗಿ ಹಾಗೂ ಅವರ ಉತ್ಪಾದನೆಗಳ ಯೋಗ್ಯ ಮಾರಾಟಕ್ಕಾಗಿ ಸ್ವಾತಂತ್ರ್ಯನಂತರ ಸರಕಾರವು ಅನೇಕ ಅವಶ್ಯಕ ಕಾರ್ಯಕ್ರಮಗಳನ್ನು ಕೈಗೊಂಡಿತು. ಅದರ ಫಲವೇ ಸಹಕಾರಿ ಮಾರಾಟ ಸಂಸ್ಥೆಗಳು. ಕೇವಲ ಮಾರಾಟ ಮಾಡಿ ಲಾಭಗಳಿಸುವುದೊಂದೇ ಈ ಸಂಸ್ಥೆಗಳ ಗುರಿಯಲ್ಲ. ಬೆಲೆಗಳನ್ನು ನಿಯಂತ್ರಿಸುವುದು, ಆಹಾರಧಾನ್ಯಗಳನ್ನು ಸರಿಯಾಗಿ ಹಂಚುವುದು, ಮಧ್ಯವರ್ತಿಗಳ ಶೋಷಣೆಯನ್ನು ತಡೆಗಟ್ಟುವುದು, ರೈತರ ಸಮಸ್ಯೆಗಳನ್ನು ನಿವಾರಿಸುವುದು, ಉತ್ಪಾದಕರಿಗೆ ಮತ್ತು ಗ್ರಾಹಕರಿಗೆ ಯೋಗ್ಯ ಬೆಲೆಗಳನ್ನು ದೊರಕಿಸಿ ಕೊಡುವುದು ಇತ್ಯಾದಿ ಸತ್ಕಾರ್ಯಗಳನ್ನು ಸಾಧಿಸುವುದೇ ಈ ಸಂಸ್ಥೆಗಳ ಹೆಗ್ಗುರಿಯಾಗಿದೆ. ಈ ಸೌಲಭ್ಯಗಳೊಂದಿಗೆ ಸಹಕಾರಿ ಮಾರಾಟ ಸಂಸ್ಥೆಗಳು ರೈತರಿಗೆ ಉತ್ತಮ ಬೀಜಗಳು, ಗೊಬ್ಬರ, ನೇಗಿಲು, ಮುಂತಾದ ಉಪಕರಣಗಳನ್ನು ನ್ಯಾಯವಾದ ಬೆಲೆಗೆ ಕೊಡುತ್ತವೆ. ಇದಲ್ಲದೆ ಅತ್ಯಾಧುನಿಕ ಯಂತ್ರಗಳ ಉಪಯೋಗ, ಪರಿಶೋಧನೆಗಳ ಪ್ರಯೋಜನಗಳನ್ನು ರೈತರಿಗೆ ಒದಗಿಸುತ್ತವೆ. ಇಂದು ನಮ್ಮ ದೇಶದಲ್ಲಿ ಎಲ್ಲಾ ಮಟ್ಟಗಳಲ್ಲಿಯೂ ಈ ಸಂಸ್ಥೆಗಳು ರೂಪುಗೊಂಡಿದ್ದು ವ್ಯವಹಾರದಲ್ಲಿ ತೊಡಗಿವೆ. ಉತ್ಪಾದಕರ ಸಂಪೂರ್ಣ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಈ ಸಂಸ್ಥೆಗಳ ಮುಖ್ಯ ಧ್ಯೇಯವಾಗಿರುವುದು ನಿಜಕ್ಕೂ ರೈತರ ಪುಣ್ಯ ವಿಶೇಷವೆನ್ನಬೇಕು.

ಹೀಗೆ ಸ್ವಾತಂತ್ರ್ಯ ನಂತರದ ದಶಕಗಳಲ್ಲಿ

...............ಇಲ್ಲಿಯವರೆಗೆ

ಸರ್ಕಾರವು ಕೃಷಿ ಅಭಿವೃದ್ಧಿಗೆ ನೆರವಾಗುವ ವಸ್ತುಗಳನ್ನು ಸಾಲದ ರೂಪದಲ್ಲಿ ರೈತರಿಗೆ ನೀಡುತ್ತಲಿದೆ. ಮೊದಲಿಗೆ ಬ್ಯಾಂಕುಗಳು ವಾಣಿಜ್ಯೋದ್ಯಮಿಗಳಿಗೆ ಮಾತ್ರ ಹೆಚ್ಚು ಸಾಲಕೊಟ್ಟು ಅಧಿಕ ಲಾಭ ಪಡೆಯುತ್ತಿದ್ದವು. ಇದನ್ನು ನಿವಾರಿಸಲು 1969ರಲ್ಲಿ ಹದಿನಾಲ್ಕು ಬ್ಯಾಂಕುಗಳನ್ನು ಸರ್ಕಾರವು ರಾಷ್ಟ್ರೀಕರಣ ಮಾಡಿ ರೈತರಿಗೆ ಕೃಷಿ ಮಾಡಲು ಹೆಚ್ಚಿನ ಮಟ್ಟಿಗೆ ಸಾಲ ನೀಡುತ್ತಿದೆ.

ಇನ್ನು ಮುಂದೆ ಓದಿ...............

ನಮ್ಮ ರಾಷ್ಟ್ರದಲ್ಲಿ ಸಹಕಾರಿ ಚಳುವಳಿಯು ಹೆಚ್ಚಿನ ವೈವಿಧ್ಯತೆಯಿಂದ ಕೂಡಿದೆ. ರೈತರಿಗೆ ಸಾಲಕೊಡುವ ವ್ಯವಸ್ಥೆಯಿಂದ ಪ್ರಾರಂಭಗೊಂಡ ಈ. ಚಳುವಳಿಯು ಇಂದು ಕೃಷಿ ಸಾಲ ಮತ್ತು ಸೇವೆ, ಮಾರಾಟ, ಬೇಸಾಯ, ಗೃಹ ನಿರ್ಮಾಣ, ಗ್ರಾಮಾಂತರ ವಿದ್ಯುದೀಕರಣ, ಮೀನುಗಾರಿಕೆ, ಸಕ್ಕರೆ ಉತ್ಪಾದನೆ, ಹಾಲು ಸಂಗ್ರಹಣೆ ಮುಂತಾದ ಹಲವಾರು ಬಗೆಯ ಉತ್ಪಾದನಾ ಚಟುವಟಿಕೆಗಳಲ್ಲಿ ತನ್ನ ಕಾರ್ಯ ವ್ಯಾಪ್ತಿಯನ್ನು ಬೆಳೆಸಿದೆ. ಇದರಿಂದಾಗಿ ಸ್ವಾತಂತ್ರ್ಯ ಪೂರ್ವದಲ್ಲಿ ಅಂಧಕಾರಮಯವಾಗಿದ್ದ ರೈತರ ಬಾಳಿನಲ್ಲಿ ಇಂದು ಕ್ರಮೇಣವಾಗಿ ಬೆಳಕು ಮೂಡಲಾರಂಭಿಸಿದೆ.

ನೀರಾವರಿ:

ಸ್ವಾತಂತ್ರ್ಯ ಪೂರ್ವದದಲ್ಲಿ ಬೇಸಾಯದ ಭೂಮಿಗಳಿಗೆ ನೀರಾವರಿ ಸೌಕರ್ಯ ಕೆಲವೊಂದು ಭಾಗಗಳಿಗೆ ಮಾತ್ರ ಸೀಮಿತವಾಗಿತ್ತು. ಇದರಿಂದ ರೈತರಿಗೆ ಕೃಷಿಯ ಕಾರ್ಯಗಳನ್ನು ಕೈಗೊಳ್ಳುವುದು ಬಹಳ ಕಷ್ಟವಾಗಿತ್ತು. ಆದರೆ ಸ್ವಾತಂತ್ರ್ಯಾನಂತರ ನಮ್ಮ ದೇಶದಲ್ಲಿ ನೀರಾವರಿ ಯೋಜನೆಗಳಿಗೆ ಹೆಚ್ಚಿನ ಮಹತ್ವವನ್ನು ನೀಡಲಾಗಿದೆ. ಇದರೊಂದಿಗೆ ನೆರೆಯ ಹಾವಳಿಯನ್ನು ತಡೆಗಟ್ಟಲು ಕ್ರಮ ಕೈಗೊಳ್ಳಲಾಗಿದೆ. ಇದರಿಂದ ಇಂದಿನ ರೈತರ ಸ್ಥಿತಿಗತಿಗಳು ಉತ್ತಮಗೊಂಡಿವೆ. ರಾಸಾಯನಿಕ ಗೊಬ್ಬರಗಳು:

ಸ್ವಾತಂತ್ರ್ಯ ಪೂರ್ವದಲ್ಲಿ ರೈತರು ಪಶುಗಳ ಮಲಮೂತ್ರಗಳನ್ನು ಹೆಚ್ಚಾಗಿ ಗೊಬ್ಬರವಾಗಿ ಉಪಯೋಗ ಮಾಡುತ್ತಿದ್ದರು. ಇದರಿಂದ ಭೂಮಿ ಸತ್ವಯುತವಾಗುವುದಿಲ್ಲವಾದರೂ, ಅವರಿಗೆ ಆಗ ಬೇರೆ ದಾರಿಯೇ ಇರಲಿಲ್ಲ ಆದರೆ ಇಂದು ರೈತರು ರಾಸಾಯನಿಕ ಗೊಬ್ಬರಗಳ ಪ್ರಾಮುಖ್ಯತೆಯನ್ನು ಚೆನ್ನಾಗಿ ಅರಿತಿದ್ದಾರೆ. ಈಗ ಅವುಗಳ ಉಪಯೋಗ ಎಷ್ಟು ಹೆಚ್ಚಿದೆಯೆಂದರೆ, ನಮ್ಮ ದೇಶದಲ್ಲಿ ಉತ್ಪಾದಿಸಿದ ಗೊಬ್ಬರಗಳು ಸಾಕಾಗದೆ ವಿದೇಶಗಳಿಂದ ಆಮದು ಮಾಡಿಕೊಳ್ಳಲಾಗುತ್ತಿದೆ.

ಯಾಂತ್ರೀಕರಣ:

ಕೃಷಿಯಲ್ಲಿ ಯಂತ್ರಗಳನ್ನು ಬಳಸುವುದರಿಂದ ಉತ್ಪಾದನೆಯನ್ನು ಹೆಚ್ಚಿಸಬಹುದು. ಆದರೆ ಕೃಷಿ ಯಾಂತ್ರೀಕರಣಕ್ಕೆ ಬೇಕಾಗುವಷ್ಟು ಬಂಡವಾಳ ನಮ್ಮ ಬಡರೈತರಲ್ಲಿಲ್ಲ. ಈ ಕಾರಣದಿಂದಾಗಿಯೇ ಸ್ವಾತಂತ್ರ್ಯ ಪೂರ್ವದಲ್ಲಿ ಯಾಂತ್ರೀಕೃತ ಬೇಸಾಯ ಕನಸಿನ ಮಾತಾಗಿತ್ತು. ಆದರೆ ಇಂದು ರೈತರ ಬಾಳಿನಲ್ಲಿ ಅದು ನನಸಾಗಿ ಪರಿಣಮಿಸಿದೆ. ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳು ರೈತರಿಗೆ ಯಂತ್ರಗಳನ್ನು ಕೊಳ್ಳಲು ಸಾಲವನ್ನು ಕೊಡುತ್ತಿವೆ. ಇದರೊಂದಿಗೆ ಸರ್ಕಾರದಿಂದ ಸ್ಥಾಪಿಸಗೊಂಡಿರುವ "ಅಗ್ರೋ– ಇಂಡಸ್ಟ್ರೀಸ್ ಕಾರ್ಪೊರೇಷನ್" (Agro –Industries Corporation) ಎಂಬ ಸಂಸ್ಥೆಯಿಂದ ಇಂದು ರೈತರು ಕಂತುಗಳ ಮೇಲೆ ಹಣವನ್ನು ಕೊಟ್ಟು ಯಂತ್ರಗಳನ್ನು ಪಡೆಯಬಹುದಾಗಿದೆ. ಇಂದಿನ ರೈತರು ಬಾವಿಗಳಿಂದ ನೀರನ್ನು ಎತ್ತಲು ವಿದ್ಯುತ್ ಚಾಲಕ ಪಂಪುಸೆಟ್‌ಗಳನ್ನು ಬಳಸುತ್ತಾರೆ. ಹಾಗೆಯೇ ಕೃಷಿಯಲ್ಲಿ ಟ್ರಾಕ್ಟರುಗಳ ಉಪಯೋಗವೂ ಹೆಚ್ಚುತ್ತಿದೆ. ಇವುಗಳ ಬಳಕೆ ನಮ್ಮ ದೇಶದಲ್ಲಿ ವರ್ಷ ವರ್ಷವೂ ಹೆಚ್ಚಲಾರಂಭಿಸಿದೆ. ರೈತರ ಮುನ್ನಡೆಗೆ ಇದೊಂದು ನಿದರ್ಶನ.

ಸಾರಿಗೆ ಸೌಲಭ್ಯಗಳು:

ಸ್ವಾತಂತ್ರ್ಯ ಪೂರ್ವದಲ್ಲಿ ನಮ್ಮ ದೇಶದ ಲಕ್ಷಾಂತರ ಹಳ್ಳಿಗಳಿಗೆ ಸಾರಿಗೆಯ ಸೌಲಭ್ಯಗಳು ಇರಲಿಲ್ಲ. ಇದರಿಂದಾಗಿ ಆಗ ರೈತರಿಗೆ ಒಂದೆಡೆಯಿಂದ ಮತ್ತೊಂದೆಡೆಗೆ ಹೋಗಿ ಬರುವುದು, ಧಾನ್ಯಗಳನ್ನು ಪಟ್ಟಣಗಳಿಗೆ ಕೊಂಡೊಯ್ದು ಮಾರಾಟಮಾಡುವುದು ಕಷ್ಟಸಾಧ್ಯವಾಗಿತ್ತು. ಆದರೆ ಇಂದಿನ ಈ ರೈತರು ಈ ಕಷ್ಟದ ಪರಿಸ್ಥಿತಿಯಲ್ಲಿ ತೊಳಲಬೇಕಾಗಿಲ್ಲ. ಸ್ವಾತಂತ್ರ್ಯ ನಂತರದ ದಶಕಗಳಲ್ಲಿ ನಮ್ಮ ದೇಶದಲ್ಲಿ ಸಾರಿಗೆಯ ಸೌಲಭ್ಯಗಳು ಹೆಚ್ಚಿದ್ದು, ಗ್ರಾಮಾಂತರ ಪ್ರದೇಶಗಳಲ್ಲಿ ರಸ್ತೆಗಳನ್ನು ತಯಾರಿಸಲಾಗಿದೆ. ಪಂಚವಾರ್ಷಿಕ ಯೋಜನೆಗಳಲ್ಲಿ ರಸ್ತೆಗಳ ವಿಸ್ತರಣಾ ಕಾರ್ಯಕ್ಕೆ ಹೆಚ್ಚಿನ ಗಮನವನ್ನು ಕೊಟ್ಟಿದ್ದು ಅದಕ್ಕಾಗಿ ನೂರಾರು ಕೋಟಿ ರೂಗಳನ್ನು ವ್ಯಯಮಾಡಲಾಗುತ್ತಿದೆ. ಇದರಿಂದ ಹಳ್ಳಿಗಳ ಹಾಗೂ ಪಟ್ಟಣಗಳ ಮಧ್ಯೆ ಸಂಪರ್ಕ, ಮೈತ್ರಿಗಳು ಹೆಚ್ಚಿವೆ. ಇಂದು ರೈತರು ಧಾನ್ಯಗಳನ್ನು

ಹಾಲು, ತುಪ್ಪ, ಬೆಣ್ಣೆ ಮೊದಲಾದ ವಸ್ತುಗಳನ್ನು ಬಹು ಸುಲಭವಾಗಿ ಪಟ್ಟಣಗಳಿಗೆ ಒಯ್ದು ಮಾರಾಟ ಮಾಡಬಹುದು. ಅದೇ ರೀತಿ ಪಟ್ಟಣಗಳಿಂದ ತಮಗೆ ಬೇಕಾದ ಸಾಮಗ್ರಿಗಳನ್ನು ಪಡೆಯ ಬಹುದು. ರೈತರ ಮನೋವಿಕಾಸವೂ ಇದರಿಂದ ಸಾಧ್ಯವಾಗುತ್ತದೆ.

**ಅಂಚೆಯ ಸೌಕರ್ಯ:**

ನಮ್ಮ ರೈತರಿಗೆ ಸ್ವಾತಂತ್ರ್ಯಕ್ಕೆ ಮೊದಲು ಅಂಚೆಯ ಸೌಕರ್ಯ ಇರಲಿಲ್ಲ. ಪತ್ರಗಳನ್ನು ಕಳಿಸಲು ಅಥವಾ ಪಡೆಯಲು ಅವರು ಅನೇಕ ಮೈಲಿ ನಡೆಯಬೇಕಾಗಿದ್ದಿತು. ನಮಗೆ ಸ್ವಾತಂತ್ರ್ಯ ಬಂದಾಗ ನಮ್ಮ ದೇಶದಲ್ಲಿ ಕೇವಲ 20 ಸಾವಿರ ಅಂಚೆ ಕಛೇರಿಗಳಿದ್ದುವೆಂದು ತಿಳಿದು ಬಂದಿದೆ. ಆದರೆ ಇಂದು ಪರಿಸ್ಥಿತಿ ಸಂಪೂರ್ಣ ಬದಲಾಗಿದ್ದು, ಸಾಮಾನ್ಯ ಪ್ರತಿ ದೊಡ್ಡ ಹಳ್ಳಿಯಲ್ಲೂ ಅಂಚೆ ಕಛೇರಿಯನ್ನು ತೆರೆಯಲಾಗಿದೆ. ಇವು ಸುತ್ತ ಮುತ್ತಲಿನ ಸಣ್ಣಪಣ್ಣ ಹಳ್ಳಿಗಳಿಗೂ ಸೇವೆಯನ್ನು ಸಲ್ಲಿಸುತ್ತವೆ.

**ಆರೋಗ್ಯ:**

ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟಿಷರು ರೈತರ ಆರೋಗ್ಯದ ಕಡೆಗೆ ಹೆಚ್ಚಿನ ಗಮನ ಕೊಟ್ಟಿಲ್ಲದಿದುದ್ದರಿಂದ ಆಗಿನ ರೈತರು ಮಲೇರಿಯಾ, ಕಾಲರಾ, ಸಿಡುಬು, ಪ್ಲೇಗು, ಮುಂತಾದ ಹಲವಾರು ಭಯಂಕರ ರೋಗಗಳಿಗೆ ಸುಲಭವಾಗಿ ತುತ್ತಾಗಿ ಸಾವಿಗೀಡಾಗುತ್ತಿದ್ದರು. ಆದರೆ ಇಂದು ಸರಕಾರವು ಸಾಂಕ್ರಾಮಿಕ ರೋಗಗಳನ್ನು ನಿವಾರಣೆಗೊಳಿಸಿ, ರೈತರ ಆರೋಗ್ಯವನ್ನು ಕಾಪಾಡಲು ಹಲವಾರು ರಾಷ್ಟ್ರೀಯ ಕಾರ್ಯಕ್ರಮಗಳನ್ನು ಕೈಗೊಂಡಿದೆ. ಇದಕ್ಕಾಗಿ ಅನೇಕ ಚಿಕಿತ್ಸಾಲಯಗಳನ್ನು ತೆರೆಯಲಾಗಿದೆ. ಇಂದು ರೈತರು ರೋಗಗಳನ್ನು ಬಹು ಸುಲಭವಾಗಿ ಗುಣಪಡಿಸಿಕೊಳ್ಳಬಲ್ಲರು. ಇತ್ತೀಚೆಗೆ ಹಳ್ಳಿಗಳಲ್ಲೂ ಆಸ್ಪತ್ರೆಗಳನ್ನು ತೆರೆಯಲಾಗಿದ್ದು, ಪರಿಣತ ವೈದ್ಯರನ್ನು ಚಿಕಿತ್ಸೆಗಾಗಿ ಕಳಿಸಲಾಗುತ್ತಿದೆ. ಇದರಿಂದಾಗಿ ರೈತರ ಆರೋಗ್ಯ ಸುಧಾರಿಸಿದ್ದು, ಆಯುಃ ಪ್ರಮಾಣವು ಹೆಚ್ಚಿದೆ. ಹಳ್ಳಿಗಳಲ್ಲಿ ಕುಟುಂಬ ಯೋಜನಾ ಶಿಬಿರಗಳನ್ನು ತೆರೆಯಲಾಗಿದ್ದು, ರೈತರಿಗೆ ಮಿತ ಸಂತಾನದ ಮಹತ್ವದ ಬಗ್ಗೆ ತಿಳುವಳಿಕೆ ಕೊಡಲಾಗುತ್ತಿದೆ. ಜೊತೆಗೆ ರೈತರ ಮಕ್ಕಳ ಪೋಷಣೆಯ ಬಗೆಗೂ ಸರಕಾರವು ವಿಶೇಷ ಗಮನ ಹರಿಸಿದೆ.

**ಶಿಕ್ಷಣ:**

ರೈತರ ಸರ್ವಾಂಗೀಣ ಪ್ರಗತಿಯಾಗಬೇಕಾದರೆ ಶಿಕ್ಷಣವು ಪೋಷಕವಾಗಬೇಕು. ಸ್ವಾತಂತ್ರ್ಯ ಪೂರ್ವದಲ್ಲಿ ರೈತರ ಮಕ್ಕಳಿಗೆ ಶಿಕ್ಷಣ ಕನಸಾಗಿತ್ತು. ಆದರೆ ಇಂದು ನಮ್ಮ ದೇಶದಲ್ಲಿ ಶಿಕ್ಷಣ ಸೌಲಭ್ಯಗಳು ವಿಸ್ತರಿಸಿದ್ದು, ರೈತರ ಮಕ್ಕಳು ಅದರ ಪ್ರಯೋಜನವನ್ನು ಪಡೆಯಬಹುದಾಗಿದೆ. ಈಗ ಹಳ್ಳಿಗಳಲ್ಲಿ ಪ್ರಾಥಮಿಕ ಶಿಕ್ಷಣ ತುಂಬ ಮುಂದುವರಿದಿದ್ದು, ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದು ಪ್ರಾಥಮಿಕ ಶಾಲೆ ಇದೆ. ಈ ಶಾಲೆಯ ಬಡಮಕ್ಕಳಿಗೆ ಹಾಲು, ತಿಂಡಿ, ಪಠ್ಯ ಪುಸ್ತಕಗಳನ್ನು ಉಚಿತವಾಗಿ ಕೊಡಲಾಗುತ್ತಿದೆ. ಸರಕಾರವು ವಯಸ್ಕರ ಶಿಕ್ಷಣದ ಯೋಜನೆಯನ್ನು ರೂಪಿಸಿದ್ದು ಇಂದು ಅನಕ್ಷರಸ್ಥ ರೈತರಿಗೆ ಓದು-ಬರಹಗಳನ್ನು ಕಲಿಸಲಾಗುತ್ತಿದೆ. ಇದರೊಂದಿಗೆ ಕುಶಲ ಕಲೆಗಳನ್ನು ಕಲಿಸುವುದಕ್ಕೂ ಗಮನ ನೀಡಲಾಗುತ್ತಿದೆ.

**ವಿದ್ಯುತ್ತಿನ ಸೌಲಭ್ಯಗಳು.**

ಕೃಷಿಯ ಸರ್ವತೋಮುಖ ಪ್ರಗತಿಯಲ್ಲಿ ವಿದ್ಯುತ್ತಿನ ಮಹತ್ವ ಅತಿ ದೊಡ್ಡದು. ಹಳ್ಳಿಗಳ ಹಾಗೂ ರೈತರ ಅಭಿವೃದ್ಧಿಯ ಮೂಲಾಧಾರವೇ ವಿದ್ಯುಚ್ಛಕ್ತಿ. ಆದ್ದರಿಂದ ಇಂದು ವಿದ್ಯುಚ್ಛಕ್ತಿ ಉತ್ಪಾದನೆಗೆ ಹೆಚ್ಚಿನ ಗಮನ ಕೊಡಲಾಗಿದ್ದು, ಹಳ್ಳಿಗಳಿಗೆ ವಿದ್ಯುಚ್ಛಕ್ತಿಯನ್ನು ಪೂರೈಸಲಾಗುತ್ತಿದೆ. ಇದರಿಂದಾಗಿ ಇತ್ತೀಚೆಗೆ ವಿದ್ಯುಚ್ಛಕ್ತಿಯಿಂದ ನಡೆಯುವ ಪಂಪುಗಳನ್ನು ಬಳಸುವುದು ಹೆಚ್ಚಾಗಿದೆ. ಇದರಿಂದ ಉತ್ಪತ್ತಿಯೂ ಅಧಿಕಗೊಂಡಿದ್ದು, ಅವರ ಆದಾಯವೂ ಹೆಚ್ಚಾಗಿದೆ.

ಹಳ್ಳಿಗಳಲ್ಲೂ ಮನೆಗಳಿಗೆ ಹಾಗೂ ರಸ್ತೆಗಳಿಗೆ ಹೆಚ್ಚಿನ ಬೆಳಕು ದೊರೆತಿದ್ದು, ಜನ ಸಂಚಾರ ಸುಲಭವಾಗಿದೆ. ವಿದ್ಯುಚ್ಛಕ್ತಿಯ ಪೂರೈಕೆಯಿಂದಾಗಿ ಇಂದಿನ ರೈತರ ಬಾಳು ಸುಖಮಯವಾಗಿದ್ದು ಅವರ ಆರ್ಥಿಕ ಸ್ಥಿತಿಯೂ ಸಹ ಸ್ವಲ್ಪ ಮಟ್ಟಿಗೆ ಸುಧಾರಿಸಿದೆ.

(ಮುಂದುವರೆಯುತ್ತದೆ.)

---

(15ನೇಪುಟದಿಂದ) ಕನ್ನಡ ಸಾಹಿತ್ಯದಲ್ಲಿ ಪದ್ಯ ರಚನೆ

ಪದ್ಯ ರಚನೆಗೆ ತೊಡಗುವ ಪ್ರತಿ ವ್ಯಕ್ತಿಯೂ, ಪದ್ಯರಚನಾ ನಿಯಮಗಳಿಗೊಳಪಟ್ಟು ಕೃತಿ ರಚನೆ ಮಾಡಿದರೆ, ಕನ್ನಡಕ್ಕೆ ಇದಕ್ಕಿಂತಲೂ ಹೆಚ್ಚಿನ ಕಾಣಿಕೆಯಿಲ್ಲವೆಂಬುದು ವಾದಾತೀತವಾದ ವಿಷಯ. ಛಂದೋ ನಿಯಮಗಳಿಗೆ ಹೊರತಾದ, 'ನವ್ಯ ಕವಿತೆಗಳನ್ನು ರಚಿಸುತ್ತೇವೆಂದು ಹೊರಟರೆ, ಕನ್ನಡಕ್ಕೆ ಇದಕ್ಕಿಂತಲೂ ಹೆಚ್ಚಿನ ಅಪಚಾರವಿಲ್ಲ. ನವ್ಯಮಾರ್ಗದ ಪದ್ಯ ರಚನೆಗಳು ಸ್ವಾಗತಾರ್ಹ; ಆದರೆ, "ನವ್ಯಮಾರ್ಗ'' ವೆಂಬ ಸೋಗಿನಲ್ಲಿ, ಪದ್ಯರಚನಾ ನಿಯಮಗಳನ್ನುಲ್ಲಂಘಿಸಿ, ಮನಬಂದಂತೆ, ನೀತಿ-ನಿಯಮಗಳಿಲ್ಲದೆ' ಮಾತ್ರಾ-ಗಣ, ಪ್ರಾಸಗಳನ್ನು ಗಣಿಸದೆ, ಪದ್ಯಗಳನ್ನು ರಚಿಸುವುದೆಂದರೆ, ಇದನ್ನು ''ನವ್ಯಮಾರ್ಗ'' ವೆಂದು ಕರೆಯಬೇಕೋ ಅಥವಾ ''ನಗ್ನಮಾರ್ಗ" ವೆಂದು ಕರೆಯಬೇಕೋ ತಿಳಿಯದಾಗಿದೆ. ಇದು ''ಮಡಿವಂತನ'' ಮಾತಲ್ಲ ವಿಚಾರವಂತರು ಯೋಚಿಸಬೇಕಾದ ವಿಷಯ. ನಿಜವಾದ ಕನ್ನಡ ಸೇವೆಯನ್ನು ನಾವು ಮಾಡಬೇಕು ಎಂದರೆ, ಸರಿಯಾದ ಮಾರ್ಗವನ್ನೇ ಅನುಸರಿಸಬೇಕು ಇಲ್ಲದಿದ್ದರೆ, ಕನ್ನಡ ಗಣಿ ಬೆಳೆಯಲಾರದು. ಗಣಿಯನ್ನು ತೋಡಿದಂತೆಲ್ಲಾ, ಹೆಚ್ಚು ಹೆಚ್ಚಾಗಿ, ಗಟ್ಟಿಘನ ಲೋಹ ನಮಗೆ ಕಾಣಬೇಕೇ ವಿನಾ, ಬರಿದಾದ, ಸತ್ವಹೀನ ಪದಾರ್ಥ. ಅಥವಾ ಮಣ್ಣೇ ಕಾಣುತ್ತಿದ್ದರೆ, ತೋಡಿ ಪ್ರಯೋಜನವೆಂತು ? ವೃಥಾ ಶ್ರಮ.

ವಿಷಯಕ್ಕೆ ತಕ್ಕಂತೆ, ಛಂದಸ್ಸನ್ನು ಬಳಸಿಕೊಳ್ಳುವುದೂ ಒಂದು ಬುದ್ಧಿವಂತಿಕೆಯೆ. ವಿಷಯವು ಹೊಸದೂ, ಮತ್ತು ನವೀನ ಸಮಾಜಕ್ಕೆ ಸಂಬಂಧಿಸಿದಿದೂ ಆದರೆ, ಹೊಸ ಛಂದಸ್ಸಿನಲ್ಲಿ ಬರೆಯಬೇಕಾದುದೂ ಸರಿಯೆ. ಆದರೆ, ಹೊಸ ವಿಷಯವೆಂದು, ಮಾತ್ರಾ-ಗಣ, ಪ್ರಾಸವಿಲ್ಲದ ಹೊಸ ಛಂದಸ್ಸಿನಲ್ಲಿ ಪದ್ಯ ರಚನೆಯಾಗಬೇಕೆಂಬ ವಾದಕ್ಕೆ ಬುಡವಿಲ್ಲ. ಅನೇಕರು, ಈ 'ನವ್ಯಕವಿತಾ ಮಾರ್ಗಣ' ಕನ್ನಡ ಸಾಹಿತ್ಯದಲ್ಲಿ "ಕ್ರಾಂತಿ ಮಾರ್ಗ" ವೆಂದು ವಾದಿಸುತ್ತಾರೆ. ಅವರ ವಾದವೇನೇ ಇರಲಿ, ಇದು ಒಂದು ''ಕ್ರಾಂತಿಹೀನ ಮಾರ್ಗ'' ವೆಂದರೆ, ಹೆಚ್ಚು ಒಪ್ಪುವುದಿಲ್ಲವೆ ?

—

---

(20ನೇ ಪುಟದಿಂದ) ಅಶೋಕನ ಧರ್ಮ ಚಕ್ರ ಸಂದೇಶ

of names of monorchs that crowned the columns of history, and their graciousness, pomp and glories the name of Ashoka shines and shines almost alone a star." ಎಂಬುದಾಗಿ ಹೊಗಳಿದ್ದಾರೆ.

ಅಶೋಕನ ಬುದ್ಧಿ ಮತ್ತು ವಿಶ್ವ ವಿಶಾಲವಾದ ಅನುಕಂಪ ಹೊಸಶಕೆಯನ್ನೇ ತಂದಿವೆ. ಭಾರತೀಯ ತ್ರಿವರ್ಣ ಧ್ವಜದಲ್ಲಿರುವ ಆತನ ಧರ್ಮಚಕ್ರ, ವಿಶ್ವಸೋದರತ್ವ, ಶಾಂತಿ, ಸೇವೆಗಳ ಹೆಗ್ಗುರುತಾಗಿದೆ, —

---

(18ನೇ ಪುಟದಿಂದ) ಮಾಘನ ಗರ್ವಭಂಗ

ಅವನು ಸೋತು ತಲೆಬಾಗಿ ನಿಂತನು. ಭೋಜರಾಜನೇ ಮುಗುಳ್ನಗುತ್ತಾ ಮುದುಕಿಗೆ ಹೇಳಿದ "ಅಜ್ಜೀ ನಾವು ಸೋತೆವು"

ಅದಕ್ಕೂ ಮುದುಕಿ ಸಮ್ಮತಿಸಲಿಲ್ಲ. ಅವಳೆಂದಳು "ಜಗತ್ತಿನಲ್ಲಿ ಸಾಲಗಾರ ಮತ್ತು ಹೆಣ್ಣು ಮಕ್ಕಳ ತಂದೆ-ಈ ಇಬ್ಬರೇ ಸೋತವರು. ನೀವು ಯಾರೋ ಸತ್ಯ ಹೇಳಿ'.

ನಾಚಿಕೆಯಿಂದ ಬಂದವರಿಬ್ಬರೂ ತಲೆಯೆತ್ತಲಿಲ್ಲ. ಮುದುಕಿಯೇ ಮುಂದುವರೆದು "ನೀವಿಬ್ಬರೂ ಭೋಜರಾಜ ಮತ್ತು ಕವಿ ಮಾಘರಲ್ಲವೆ ? ಸುಳ್ಳಾಡುತ್ತಿರುವಿರೇಕೆ ? ಈ ದಾರಿಯಲ್ಲಿ ಹೋದರೆ ಉಜ್ಜಯನಿಯನ್ನು ಸೇರುವಿರಿ '' ಎಂದಳು. —

(10ನೇ ಪುಟದಿಂದ)

## ವಿಶ್ವವಂದ್ಯ ರವೀಂದ್ರರು

ಸುಳಿಹು ಹೊಳಹು (ಪತ್ರ ಸಂಕಲನ), ಅಲೆದಾಡುವ ಹಕ್ಕಿಗಳು (ಶೋಕ ಗೀತೆಗಳು), 1925 ಗೋರಾ ಬಂಧನದ ಜಿಡುಗಡೆ ಮತ್ತು ಇತರ ಕಥೆಗಳು. (1926) ಕೆಂಪುಕಣಗಿಲು (ಏಕಪಾತ್ರಾಭಿನಯದನಾಟಕ) 'ಮಿಂಚು ಹುಳುಗಳು, (1928) ಇವುಗಳನ್ನು ಪ್ರಕಟಿಸಿದರು.

1929 ರಲ್ಲಿ ಮತ್ತೊಮ್ಮೆ ಟಾಗೋರರು ಅಮೇರಿಕೆಯ ಯಾತ್ರೆ ಕೈಗೊಂಡರು. ಆಗ ಅವರಿಗೆ ಇನ್ನೂ ಹೆಚ್ಚಿನ ಮುಖಭಂಗವಾಯಿತು. ಸುಂಕದ ಕಛೇರಿಯಲ್ಲಿ ಅವರನ್ನು ಬಹುವೇಳೆ ನಿಲ್ಲಿಸಿಕೊಂಡು ತಪಾಸಿಸಿದರು. ಇದರಿಂದ ಅವಮಾನಿತರಾದ ಟಾಗೋರರು ಲಾಸ್ ಏಂಜಲೀಸ್‌ನಲ್ಲಿ ಒಂದು ಉಪನ್ಯಾಸ ಮುಗಿಸಿ ಭಾರತಕ್ಕೆ ಬಂದು ಬಿಟ್ಟರು. ಆಗ ಭಾರತದ ಒಬ್ಬ ಮಹಾನ್ ಕವಿಗೆ ತಮ್ಮ ನಾಡಿನಲ್ಲಾದ ಅವಮಾನದಿಂದ ಇಡೀ ಅಮೇರಿಕೆಯೇ ಎಚ್ಚೆತ್ತಿತು. ಸರ್ಕಾರ ಕ್ಷಮೆ ಕೇಳಿ ಅವರನ್ನು ಮತ್ತೆ ಅಮೇರಿಕೆಗೆ ಬರಲು ಆಹ್ವಾನಿಸಿತು. ಟಾಗೋರರು 1930 ರಲ್ಲಿ ಕೊನೆಯಬಾರಿಗೆ ಮತ್ತೆ ಅಮೇರಿಕೆಗೆ ಹೋದರು. ಈ ಭಾರಿ ಅಮೇರಿಕೆಯ ಜನತೆ ಅವರನ್ನು ತುಂಬ ಪ್ರೀತಿ-ಆದರಗಳಿಂದ ಆಹ್ವಾನಿಸಿತು.

ಟಾಗೋರರ ಈ ಬಾರಿಯ ಸಂದರ್ಶನದ ಮುಖ್ಯ ವೈಶಿಷ್ಟ್ಯವೆಂದರೆ ಬೋಸ್ಟನ್, ಫಿಲಾಡೆಲ್ಫಿಯ ನ್ಯೂಯಾರ್ಕ್‌ಗಳಲ್ಲಿ ಅವರ ಕಲಾಕೃತಿಗಳ ಪ್ರದರ್ಶನವೇರ್ಪಟ್ಟಿದ್ದು. 1930 ರ ಡಿಸೆಂಬರ್ 15 ರಂದು ಟಾಗೋರರು ಅಮೇರಿಕೆಯ ಸಂದರ್ಶನ ಮುಗಿಸಿ ತುಂಬಿದ ಹೃದಯದಿಂದ ಇಂಗ್ಲೆಂಡಿಗೆ ಪ್ರಯಾಣ ಬೆಳೆಸಿದರು.

ಮತ್ತೊಂದು ಮಹಾಯುದ್ಧ ಪ್ರಕ್ಷುಬ್ಧ ವಾತಾವರಣ ನಿರ್ಮಾಣಗೊಂಡ ಸಮಯ ಅದು 1941 ಶಾಂತಿನಿಕೇತನದಲ್ಲಿ ಅನಾರೋಗ್ಯದಿಂದ ಹಾಸಿಗೆಹಿಡಿದಿದ್ದ ಟಾಗೋರರು ಪ್ರಕ್ಷುಬ್ಧ ಜಗತ್ತಿನಿಂದ ಆಗಸ್ಟ್ ತಿಂಗಳಲ್ಲಿ ಬೀಳ್ಕೊಂಡರು. ಆಗ ಇಡೀ ಜಗತ್ತೇ ಶೋಕದಿಂದ ಕಣ್ಣೀರು ಸುರಿಸಿತು. ಪತ್ರಿಕೆಗಳು India's greatest man of letters, the Soul of Bengal, Great Scholar and educator, Ambassador of friend ship between East and West ಎಂದೆಲ್ಲ ಗುಣಗಾನ ಮಾಡಿದವು. ಹೀಗೆ ಟಾಗೋರರು ತಮ್ಮ ಅದ್ಭುತ ಸಾಹಿತ್ಯ ಶಕ್ತಿಯಿಂದ ಅನೇಕಾನೇಕ ಜನರ ಹೃನ್ಮನಗಳನ್ನು ಗೆದ್ದ ಮಹಾನ್ ವ್ಯಕ್ತಿ. —

---

## ನಾಹೆಚ್ಚೋ ನಿನ್ನ ತವರ್‍ಹೆಚ್ಚೋ

(12 ನೇ ಪುಟದಿಂದ)

ಗಂಡ ಹೆಂಡರ ಜಗಳ ಗಂಧ ತೀಡಿದ್ಹಾಂಗ
ಲಿಂಗಕ್ಕ ನೀರು ಎರದ್ಹಾಂಗ। ಹಿಂಹೊಳೆಯ
ಗಂಗವ್ವ ಸಾಗಿ ಹರಿದ್ಹಾಂಗ ॥

ನಿಜ; ಗಂಧವನ್ನು ತೀಡಿದಷ್ಟೂ ಸುವಾಸನೆ ಹೆಚ್ಚಾಗುತ್ತದೆ. ಲಿಂಗವನ್ನು ನೀರಿನಿಂದ ತೊಳೆದಷ್ಟೂ ಹೆಚ್ಚು ಶುಭ್ರನಾಗಿ ಪ್ರಕಾಶಮಾನವಾಗಿ ಹೊಳೆಯುತ್ತದೆ. ಆದರೆ ಲಿಂಗದ ಮೇಲೆ ಹಾಕಿದ ನೀರು ನಿಲ್ಲದೆ ಹರಿಯುತ್ತದೆ. ಅದರಂತೆ ಗಂಡಹೆಂಡತಿಯರ ಜಗಳ ತಾತ್ಕಾಲಿಕವಾದುದು. ಆದರಿಂದ ಅವರ ದಾಂಪತ್ಯಮತ್ತಷ್ಟು ಸಾಮರಸ್ಯ ಹೊಂದುತ್ತದೆ. ಜನಪದ ಕವಿಗಳ ಅನುಭವ ಅಭಿವ್ಯಕ್ತಿ ಅದೆಷ್ಟು ಸಹಜ ! —

ಕರ್ತವ್ಯ ತತ್ಪರನಾಗಿ
ಮೌನದಿಂದಿರುವುದು
ಅಪಪ್ರಚಾರಕ್ಕೆ
ಯೋಗ್ಯವಾದ ಉತ್ತರ.

—ವಾಷಿಂಗ್ಟನ್.

(ದಿನಾಂಕ 29.7.76 ರಿಂದ 29.8.76ರ ವರೆಗೆ)

# ಮಾಸ ಭವಿಷ್ಯ

ಜ್ಯೋತಿಷ್ಯ ವಿದ್ವಾನ್
—ಎನ್.ವಿ.ಚನ್ನವೀರಶಾಸ್ತ್ರಿ

**ಮೇಷ**

೨ನೇ ಗುರು– ವಿಶೇಷವಾರ್ತೆ, ವ್ಯಾಸಂಗ, ವ್ಯಾಪಾರ, ಉದ್ಯೋಗ ಉತ್ತಮ, ೪ನೇ ಶನಿ– ಧಾನ್ಯಲಾಭ, ಶುಭ ಸೂಚನೆ, ಮಿತ್ರರ ಆಗಮನವು

**ವೃಷಭ**

೧ನೇ ಗುರು– ಅನಾರೋಗ್ಯ, ಸ್ತ್ರೀ ಮೂಲಕ ಕಲಹ:, ಸ್ವಪ್ರಯತ್ನ ವಿಳಂಬ ಖರ್ಚು ೩ನೇ ಶನಿ– ಭ್ರಾತೃ ವಿಚಾರ, ವ್ಯಾಪಾರ, ವ್ಯಾಸಂಗ ಉತ್ತಮ, ಸರಕಾರಿ ಸುದ್ದಿ

**ಮಿಥುನ**

೧೨ ನೇ ಗುರು– ಋಣ, ಧಣಿಗಳ ನಿರಾಕರಣೆ, ಕಾರ್ಯ ವಿಳಂಬ, ಅಧಿಕ ಖರ್ಚು ೨ನೇ ಶನಿ– ಕುಟುಂಬ ಚಿಂತೆ, ಮಾರ್ಪಾಟು, ತಕರಾರು, ಅಪಾದನೆ. ಕಷ್ಟ.

**ಕರ್ಕ**

೧೧ ನೇ ಗುರು– ಆರ್ಥಿಕ ವೃದ್ಧಿ, ಉದ್ಯೋಗ, ವ್ಯಾಸಂಗ, ವ್ಯಾಪಾರ, ಮೆಚ್ಚಿಗೆ, ಧೈರ್ಯ ೧ನೇ ಶನಿ– ಸ್ಥಾನ ಮಾನ ಮಾರ್ಪಾಟು, ಮಾರ್ಗಾಯಾಸ, ನೋವು ಚಿಂತೆ,

**ಸಿಂಹ**

೧೦ ನೇ ಗುರು– ಆಹ್ವಾನ, ಉದ್ಯೋಗ, ವ್ಯಾಪಾರ, ಕುಟುಂಬ, ಆರ್ಥಿಕ ಇವು ಮೇಲು. ೧೨ ನೇ ಶನಿ– ಸರಕಾರಿ ಸುದ್ದಿ, ಧಣಿ ಅಪ್ಪಣೆ ಖರ್ಚು, ವಾಹನ ಭಯ, ದು:ಖ

**ಕನ್ಯಾ**

೯ ನೇ ಗುರು– ದೇವರ ದರ್ಶನ, ಸತ್ಕಾರ್ಯ ಸ್ತ್ರೀ ವಿಚಾರ, ಶುಭ ವಾರ್ತೆ, ಶಾಂತಿ. ೧೧ ನೇ ಶನಿ– ವ್ಯಾಸಂಗ ಉತ್ತಮ, ವ್ಯಾಪಾರ, ಉದ್ಯೋಗ, ಬೇಸಾಯ ಉತ್ತಮ

**ತುಲಾ**

೮ ನೇ ಗುರು– ಅನಾರೋಗ್ಯ. ಧಣಿ ಕೋಪ, ಕ್ರಾಂತಿ, ಮಾರ್ಗಾಯಾಸ, ಖರ್ಚು, ೧೦ ನೇ ಶನಿ– ಅಧಿಕ ಸಂಚಾರ, ಸರಕಾರಿ ಆರ್ಡರು, ಹೊಸ ಏರ್ಪಾಟು ಗೃಹ ಕೆಲಸ

**ವೃಶ್ಚಿಕ**

೭ ನೇ ಗುರು– ಆಪ್ತರ ನೆರವು, ಕಾರ್ಯ ಜಯ, ಧನ ಸಂಗ್ರಹ, ಪ್ರಯಾಣ ಸುಖ. ೯ ನೇ ಶನಿ- ಹಿರಿಯರ ಕರೆ, ಗಾಬರಿ ಸುದ್ದಿ, ಉತ್ಸಾಹ ನಾಶ, ಅಧಿಕೃತ ಖರ್ಚು

**ಧನಸ್ಸು**

೬ ನೇ ಗುರು– ಸ್ತ್ರೀಯರಿಗೆ ವೈದ್ಯ ಚಿಕಿತ್ಸೆ' ಕಲಹ, ವಿಚಿತ್ರ ವರ್ತನೆ, ಫಾಸಿ ಕೆಲಸ. ೮ ನೇ ಶನಿ– ಅನಾರೋಗ್ಯ, ವಿಕ್ರಯ, ಅಪಾಯ, ಸರಕಾರದ ಭಯ ಗೃಹ ಚಿಂತೆ

**ಮಕರ**

ನೇ ಗುರು– ಮೂಲ ಧನ, ಉತ್ಪಾದನಾ ಮಾರ್ಗ, ಬುದ್ಧಿ ಕುಶಲತೆ, ಮೂಲ ವಿಚಾರ ೭ ನೇ ಶನಿ– ಸ್ತ್ರೀ ಪುತ್ರರಿಗೆ ಕಾಟ, ಚರ ಸ್ಥಿರ ಸ್ವತ್ತಿನ ವ್ಯವಹಾರ, ಕಾ ನೂನು ಜಾ

**ಕುಂಭ**

೪ ನೇ ಗುರು– ಕುಟುಂಬ ಸುಧಾರಣೆ, ಧಾನ್ಯ ಸಂಗ್ರಹ, ವ್ಯಾಪಾರ, ಉದ್ಯೋಗ ಸುಖ. ೬ ನೇ ಶನಿ ಸ್ವಪ್ರಯತ್ನ ನಡೆಯುತ್ತೆ. ಆರ್ಥಿಕ ಸ್ಥಿತಿ ಉತ್ತಮ, ಕಾ ರ್ಯಾನುಕೂಲ

**ಮೀನ**

೩ ನೇ ಗುರು– ಅನಾರೋಗ್ಯ, ಅಪಾಯ, ಅಪಾದನೆ, ಖರ್ಚು, ಚಿಂತೆ ೫ ನೇ ಶನಿ– ಸ್ಥಾನಭ್ರಂಶ ಬುದ್ಧಿ ಮಾಂದ್ಯ ಹಣ ದುಬ್ಬರ, ಕನಿಷ್ಟತೆ


*With best compliments from:*

MALBAR KRISHNA BEEDIS
MANDIPET ,
TUMKUR.



# 'ಸಿದ್ಧಗಂಗಾ'

## 'ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ'

164 ಶ್ರೀ ಟಿ. ಗಂಗಣ್ಣ
ತಿಪಟೂರು ಪಾಳ್ಯ, ಗುಬ್ಬಿ ತಾ||,
ತುಮಕೂರು ಜಿಲ್ಲೆ

165 ಆಲಮ್ಮನವರ ಶ್ರೀ ಶಿವಣ್ಣ,
ಅಮ್ಮನಘಟ್ಟ, ಗುಬ್ಬಿ ತಾ||,
ತುಮಕೂರು ಜಿಲ್ಲೆ

166 ಶ್ರೀ ಡಿ. ರಾಮೇಗೌಡ,
ಅಮ್ಮನಘಟ್ಟ, ಗುಬ್ಬಿ ತಾ||
ತುಮಕೂರು ಜಿಲ್ಲೆ

167 ಶ್ರೀ ಗುಂಡಿ ವೀರಪ್ಪ,
ಹಿರೆಹಳ್ಳದಗಲ್ಲಿ, ಹಡಗಲಿ ತಾ||
ಬಳ್ಳಾರಿ ಜಿಲ್ಲೆ

168 ಶ್ರೀ ಗುಬ್ಬಣ್ಣ,
ಹೇರೂರು, ಗುಬ್ಬಿ ತಾ||, ತುಮಕೂರು ಜಿಲ್ಲೆ

169 ಶ್ರೀ ಹೆಚ್. ಆರ್. ನಂಜಪ್ಪ,
ಹೇರೂರು, ಗುಬ್ಬಿ ತಾ||, ತುಮಕೂರು ಜಿಲ್ಲೆ

170 ಶ್ರೀ ಮಹಾಲಿಂಗಪ್ಪ,
ಹೇರೂರು, ಗುಬ್ಬಿ ತಾ|| ತುಮಕೂರು ಜಿಲ್ಲೆ

171 ಶ್ರೀ ಬಿ. ಎನ್. ಗುರುಸಿದ್ದಪ್ಪ,
ಕಿಟ್ಟದಕುಪ್ಪೆ, ಗುಬ್ಬಿ ತಾ||

172 ಮೂಡಲಗಿರಿಯಪ್ಪ S/o ಗವಿರಂಗಯ್ಯ,
ಕಿಟ್ಟದಕುಪ್ಪೆ, ಗುಬ್ಬಿ ತಾ||

173 ಶ್ರೀ ದೊಡ್ಡ ವೀರಯ್ಯ,
ಕಿಟ್ಟದಕುಪ್ಪೆ, ಗುಬ್ಬಿ ತಾ||

174 ಶ್ರೀ ಹೆಚ್. ಎನ್. ಮರಿಬಸವಯ್ಯ,
ಹೊದಲೂರು, ಗುಬ್ಬಿ ತಾ||

175 ಶ್ರೀ ಹೆಚ್. ಎನ್. ಸದಾಶಿವಯ್ಯ,
ಹೊದಲೂರು, ಗುಬ್ಬಿ ತಾ||

176 ಶ್ರೀ ಎಂ. ಡಿ. ಸಿದ್ಧಲಿಂಗಪ್ಪ,
ಎಂ. ಎಸ್. ಕೋಟೆ. ಗುಬ್ಬಿ ತಾ||

177 ಶ್ರೀ ಸಿ. ಎಂ. ಗುರುಮೂರ್ತಿ,
ಎನ್. ರಾಂಪುರ, ಗುಬ್ಬಿ ತಾ||

178 ಶ್ರೀಮತಿ ಎಸ್. ಎಲ್. ಸಿದ್ಧಲಿಂಗಮ್ಮ
ನಿಟ್ಟೂರು, ಗುಬ್ಬಿ ತಾ||

179 ಶ್ರೀ ಟಿ. ಹೆಚ್. ಮಹಾಲಿಂಗಪ್ಪ,
ತ್ಯಾಗಟೂರು, ಗುಬ್ಬಿ ತಾ||

180 ಶ್ರೀ ಹೆಚ್. ಎನ್. ನಂಜೇಗೌಡ,
ಹಲಸಿನ ನಾಗೇನಹಳ್ಳಿ, ಗುಬ್ಬಿ ತಾ||

181 ಶ್ರೀ ಕೆ. ಪಿ. ಗುರುಸಿದ್ದಯ್ಯ
ತುಮಕೂರು.

182 ಶ್ರೀ ಎಂ. ಆರ್. ಶಿವಣ್ಣ,
ಎನ್. ರಾಂಪುರ, ಗುಬ್ಬಿ ತಾ||

183 ಶ್ರೀ ಬಸಪ್ಪ,
ಬೆಣಚಿಗೆರೆ, ಗುಬ್ಬಿ ತಾ||

184 ಶ್ರೀ ಸಂಗಪ್ಪ,
ಬೆಣಚಿಗೆರೆ, ಗುಬ್ಬಿ ತಾ||

(ಮುಂದುವರೆಯುತ್ತದೆ)

'SIDDAGANGA' Monthly, Sree Siddaganga Mutt. KRN Q-9.
Registered with the Registrar of News papers for India under No. 17139/69

ಶೀಘ್ರದಲ್ಲೇ ಸಿದ್ಧಗಂಗಾ ಕ್ಷೇತ್ರದಲ್ಲಿ ವಿಸ್ತರಣಾ ಶಾಖೆ ಪ್ರಾರಂಭ

ನಿಮಗೆ ಉದ್ಯೋಗ ನೀಡಿದವರು ಕೊಡದಿದ್ದರೆ ಏನಾಯಿತು? ನೀವೇ ಸ್ವತಃ ವಿಶ್ರಾಂತಿ ವೇತನವನ್ನು ಕೊಟ್ಟುಕೊಳ್ಳಿ!

ಇದು

"ವಿಜಯಾ ವಿಶ್ರಾಂತಿವೇತನ ಯೋಜನೆ"

ಯಲ್ಲಿ ಅತ್ಯಂತ ಸುಲಭ!!

144 ತಿಂಗಳು ಸತತವಾಗಿ ಪ್ರತಿತಿಂಗಳು 100 ರೂಗಳ ಠೇವಣಿ ಇಡಿರಿ. ಈ ಅವಧಿಯ ಕೊನೆಯಲ್ಲಿ ನೀವು ಕೆಳಗಿನ ಸೌಲಭ್ಯಗಳನ್ನು ಹೊಂದುವಿರಿ.



★ ನಮ್ಮಲ್ಲಿ ಶೇಖರಿಸಿದ 14,400 ರೂ. ಗಳ ಒಂದು ಆಕರ್ಷಕ ಮೊತ್ತ.

★ ಆಜೀವ ಪರ್ಯಂತ ವಿಶ್ರಾಂತಿ ವೇತನ! ನಿಮ್ಮ ಉಳಿದ ಜೀವನಾವಧಿ ಪೂರ್ತಾ ತಿಂಗಳಿಗೆ 100 ರೂ. ಗಳಂತೆ ಪಡೆಯಿರಿ.

★ ನೀವು ವಿಶ್ರಾಂತಿ ವೇತನಾವಧಿಯ ಯಾವುದೇ ವೇಳೆಯಲ್ಲಿ ವಿಶ್ರಾಂತಿ ವೇತನ ಪಡೆಯುವುದನ್ನು ಸ್ಥಗಿತಗೊಳಿಸಲು ತೀರ್ಮಾನಿಸಿದರೆ ಈ ಯೋಜನೆಯ ನಿಯಮಾವಳಿಯಂತೆ ನಿಮಗೆ 12,000ರೂ.ಗಳ ಹೆಚ್ಚು ಮೊತ್ತವನ್ನು ನೀಡಲಾಗುವುದು.

★ ಹುಟ್ಟು ಹಬ್ಬದ ಕೊಡುಗೆ: ಹಣ ಪಾವತಿಯ ಅವಧಿಯಲ್ಲಿ ನಿಮ್ಮ ಪ್ರತಿವರ್ಷದ ಹುಟ್ಟು ಹಬ್ಬದ ದಿನವೂ ಹಾರ್ದಿಕ ಶುಭಾಶಯಗಳೊಡನೆ ಒಂದು ಉಡುಗೊರೆಯನ್ನು ಕಳುಹಿಸುತ್ತೇವೆ.

ಯಾವುದೇ ವಯಸ್ಸಿನಲ್ಲಿ ಬೇಕಾದರೂ
ಈ ಯೋಜನೆಯಲ್ಲಿ ಹಣ ಉಳಿತಾಯ ಮಾಡಲು ತೊಡಗಿರಿ.

ಈ ಬಗ್ಗೆ ಎಲ್ಲ ವಿವರಗಳನ್ನು ನಿಮ್ಮ ಸಮೀಪದ ವಿಜಯಾ ಬ್ಯಾಂಕ್ ಶಾಖೆಯಲ್ಲಿ ಇಂದೇ ಪಡೆಯಿರಿ. ದೇಶಾದ್ಯಂತ 400 ಕ್ಕೂ ಮಿಕ್ಕ ಶಾಖೆಗಳನ್ನು ನಾವು ಹೊಂದಿದ್ದೇವೆ.

# ವಿಜಯಾ ಬ್ಯಾಂಕ್ ಲಿಮಿಟೆಡ್

ರಿಜಿಸ್ಟರ್ಡ್ ಕಛೇರಿ:
ಲೈಟ್ ಹೌಸ್ ಹಿಲ್ ರೋಡ್, ಮಂಗಳೂರು.

ಆಡಳಿತ ಕಛೇರಿ:
ರೆಸಿಡೆನ್ಸಿ ರೋಡ್, ಬೆಂಗಳೂರು-25

ಛೇರ್ಮನ್:- ಎಂ. ಸುಂದರರಾಮ್ ಶೆಟ್ಟಿ

ಶ್ರೀ ಸಿದ್ಧಲಿಂಗೇಶ್ವರ [illegible] ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.